ಕಡಿಮೆ ಹಣ ಖರ್ಚು ಮಾಡಿ
ಹೆಚ್ಚು ಬಟ್ಟೆಗಳನ್ನು ಒಗೆಯಿರಿ

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

‘ಕಸ್ತೂರಿ’ ಬಾರ್ ಸೋಪ್

‘ಕಸ್ತೂರಿ’ ನೀಲಂ ಬಾರ್ ಸೋಪ್

ತಯಾರಕರು:

ರಾಮಕೃಷ್ಣ ಆಯಿಲ್ ಮಿಲ್, ತುಮಕೂರು.

# ಸಿದ್ಧಗಂಗಾ

ಸಂಪುಟ—೨೦ ಸಂಚಿಕೆ - ೫ ಮೇ, ೧೯೮೩

ಶಿವಾಚಾರಪಕ್ಷಂ ಕೃಪಾಭೃತ್ಕಟಾಕ್ಷಂ ।
ಷಡಧ್ವಾದಿಬೀಜಂ ಸತಾಮರ್ತ್ಯಭೂಜಂ ॥
ಪರಿತ್ಯಕ್ತರಾಗಂ ಪರಬ್ರಹ್ಮಯೋಗಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೪ ॥

ಕಲಾಸತ್ಕಲಾಪಂ ಕಪರ್ದಿಸ್ವರೂಪಂ ।
ಮನೋವೃತ್ತಿಶೂನ್ಯಂ ಮುನಿವ್ರಾತಮಾನ್ಯಂ ॥
ಸಮಂಚಿದ್ಗುಣಾಂಕಂ ಸದಾ ನಿಷ್ಕಲಂಕಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೫ ॥

ಪವಿತ್ರಾಭಿಧೇಯಂ ಪರಾಮ್ನಾಯಗೇಯಂ ।
ನಿರಸ್ತಾಂಗಜಾತಂ ಸುಧಾಸ್ಫೀತಗೀತಂ ॥
ಪರಿಚ್ಛಿನ್ನಪಾಶಂ ಸಮಸ್ತಾಮರೇಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥ ೬ ॥

# ಈ ಸಂಚಿಕೆಯಲ್ಲಿ



# ಶ್ರೀವಾಣಿ

'ಕಾಯಕ–ದಾಸೋಹ' ಈ ಮಾತುಗಳು ಕೇವಲ ವೀರಶೈವ ಸಂಪ್ರದಾಯದ ಪಾರಿಭಾಷಿಕ ಶಬ್ದಗಳಲ್ಲ. ಪರಂತು ಸಮಸ್ತ ಮಾನವನ ಬದುಕಿನ ಪರಿಪೂರ್ಣತೆಯ ಮಾಧ್ಯಮವಾಗಿವೆ. ಅದರಂತೆ ಶಿವ ಪಥದಲ್ಲಿ ನಡೆಯುವ ಪ್ರತಿಯೊಬ್ಬ ವ್ಯಕ್ತಿಯ ಬಾಳರಥದ ಎರಡು ಚಕ್ರಗಳಿದ್ದಂತಿವೆ; ಭಕ್ತ ಲಿಂಗದಲ್ಲಿ ಬೆರೆಯಲು ಸಾಧನೆಗಳಾಗಿವೆ. ಪರಿಭಾಷೆಯ ಗೊಂದಲವಿಲ್ಲದೆ, ವ್ಯಾಖ್ಯಾನದ ಅವಶ್ಯಕತೆಯಿಲ್ಲದೆ ಎಂಥವರಿಗೂ ತಿಳಿಯುವಂತೆ ತಿಳಿಯಾಗಿ ಅವುಗಳ ಲಕ್ಷಣವನ್ನು ನಮ್ಮ ಶರಣರು ಹೇಳಿದ್ದಾರೆ.

"ಎನ್ನೊಡಲವಸರಕ್ಕೆ ಕುದಿಯದಿರುವುದು ;
'ಹಾಗದ ಕಾಯಕವ ಮಾಡಿ ಹಣವೊಡ್ಡವ
ತಾ ಎಂಬದಿರುವುದು'
'ಅಂದಂದಿನ ನೇಮವ ಅಂದಂದೇ ಸಲಿಸುವುದು"

ಇವು ಕಾಯಕದ ಲಕ್ಷಣವಾದರೆ,

'ಸಂದಿಲ್ಲದೆ ಸಂಶಯವಿಲ್ಲದೆ ಮಾಡುವುದು'
'ಮಾಡಿಹೆನೆಂಬ ಮಾಟಕೂಟದಲ್ಲಿ ಚಿತ್ತನಿಲ್ಲದಿರುವುದು'
'ದಾಯಗಾರಿಕೆಯಲ್ಲಿ ತಂದು ದಾಸೋಹವ ಮಾಡದಿರುವುದು'

ಮುಂತಾದುವು ದಾಸೋಹದ ಲಕ್ಷಣಗಳೆನಿಸಿವೆ.

ಪರಿಪೂರ್ಣತೆಯನ್ನು ಪರಸ್ಪರ ಅಪೇಕ್ಷಿಸುವ ಇಂಥ ಮಂತ್ರಸದೃಶ ದಿವ್ಯ ಮಾತುಗಳನ್ನು ಮಾನವಕುಲವು ಮನನ ಮಾಡಿ, ಕೃತಿಗಿಳಿಸಿದಾಗ ಮಾತ್ರ, ಮಂಗಳ ಮಹಾ ಬೆಳಗು ಮೂಡಲು ಸಾಧ್ಯ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ

* * *

ಸಹ ಸಂಪಾದಕರು
ಪಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಇಂದು ಸ್ವತಂತ್ರಭಾರತದ ಭವಿಷ್ಯದ ಬಗೆಗೆ ಯೋಚಿಸುವವರಿಗೆಲ್ಲ ಎಲ್ಲ ದಿಕ್ಕುಗಳಿಂದಲೂ ನಿರಾಶಾದಾಯಕವಾದ, ಭಯ ಭೀತಿಗೊಳಿಸುವ ಅಂಶಗಳೇ ಗೋಚರವಾಗತೊಡಗಿವೆ. ಬರಬರುತ್ತ ಭಾರತದ ಆಂತರಿಕ ರಾಜಕೀಯ ಜೀವನದಲ್ಲಿ ಅನೇಕ ಬಿರುಕುಗಳನ್ನು ಕಾಣುವಂತಾಗಿ ವಿಚಾರಶೀಲರೆಲ್ಲ ತಲೆಕೆರೆದುಕೊಳ್ಳುವಂತಾಗಿದೆ. ಸ್ವಾತಂತ್ರ್ಯಾನಂತರ ಸಮೃದ್ಧಭಾರತವನ್ನು ಕಾಣುತ್ತೇವೆನ್ನುವವರ ಆಶೆಯೆಲ್ಲ ನುಚ್ಚುನೂರಾಗಿದೆ. ದಿನೇದಿನೇ ರಾಷ್ಟ್ರ ದುರ್ಬಲಗೊಳ್ಳುತ್ತಿದೆಯೇನೋ ಎನ್ನುವ ಭಯಭೀತಿ ಆವರಿಸತೊಡಗಿದೆ. ಇಡಿಯಾಗಿ ಭಾರತ ಸ್ವತಂತ್ರಗೊಳ್ಳದೆ ಹೋಳಾಗಿ ಸ್ವತಂತ್ರವಾದಾಗಿನಿಂದಲೇ ಅನಿಷ್ಟ ಪರಂಪರೆಗಳು ಉಂಟಾಗುತ್ತ ಬಂದಿರುವುದನ್ನು ನಮ್ಮ ರಾಜಕೀಯ ಜೀವನದಲ್ಲಿ ಕಾಣಬಹುದಾಗಿದೆ. ಈ ಉಪಖಂಡದ ಸಮಗ್ರ ಭದ್ರತೆಗೆ ಭಾರತ ಪಾಕಿಸ್ತಾನ ಮತ್ತು ಪಾಕಿಸ್ತಾನದಿಂದ ಇತ್ತೀಚೆಗೆ ಸಿಡಿದು ಸ್ವತಂತ್ರಗೊಂಡ ಬಾಂಗ್ಲಾ ಈ ಮೂರೂ ರಾಷ್ಟ್ರಗಳು ಹೊಣೆಯೆಂಬುದನ್ನು ಅವು ಅರಿಯದೆ ಪರಸ್ಪರ ಸಂಶಯದ ಸುಳಿಯಲ್ಲಿ ಸಿಕ್ಕು ವ್ಯವಹರಿಸುವುದು, ಯಾರಿಗೂ ಕ್ಷೇಮವನ್ನುಂಟುಮಾಡುವಂತಹುದಲ್ಲ. ನಿಜವಾಗಿ ಪಾಕಿಸ್ತಾನ ಮತ್ತು ಬಾಂಗ್ಲಾಗಳು ಚಿಕ್ಕ ರಾಷ್ಟ್ರಗಳು. ಅವು ತಮ್ಮ ಭದ್ರತೆಯನ್ನು ಭಾರತದ ಭದ್ರತೆಯೊಂದಿಗೆ ಕಾಯ್ದುಕೊಳ್ಳಬೇಕಾಗಿತ್ತು, ಆದರೆ ಹೀಗಾಗುತ್ತಿಲ್ಲ. ದಿನೇದಿನೇ ಪಾಕಿಸ್ಥಾನ ಶಸ್ತ್ರಾಸ್ತ್ರಗಳಿಂದ ಬೀಗಿನಿಲ್ಲುವತ್ತ ಅನ್ಯ ರಾಷ್ಟ್ರದವರ ಪ್ರಚೋದನೆಗೊಳಗಾಗಿ ತನ್ನ ಉತ್ತಮ ಭವಿಷ್ಯವನ್ನು ಯೋಚಿಸಿದ್ದರೆ ಆದೊಂದು ತಪ್ಪು ಹೆಜ್ಜೆಯೇ. ಅದರ ಈ ತಪ್ಪು ಹೆಜ್ಜೆಯಿಂದ ಭಾರತಕ್ಕಾದ ಆತಂಕ ಅಷ್ಟಿಷ್ಟಲ್ಲ. ಇದು ತನ್ನ ಅಭಿವೃದ್ಧಿಗಾಗಿ ವ್ಯಯಿಸಬೇಕಾದ ಅಪಾರ ಧನವನ್ನು ತನ್ನ ಆಂತರಿಕ ಭದ್ರತೆಗೆ ವ್ಯಯಿಸುವ ಸನ್ನಿವೇಶ ಸ್ವಾತಂತ್ರ್ಯದ ಮೊದಲದಿನಗಳಿಂದಲೂ ಮೊದಗಿದೊಂದು ದುರದೃಷ್ಟಕರಪ್ರಸಂಗವಾಗಿದೆ. ಇಂಥ ಪರಿಸ್ಥಿತಿಯಲ್ಲಿ ತನ್ನ ಅಭಿವೃದ್ಧಿಯನ್ನು ಸಾಧಿಸದೆ ಇತರರ ಅಭಿವೃದ್ಧಿಯನ್ನು ಸಹಿಸದ ಪಾಕಿಸ್ಥಾನ ತನ್ನ ಮನೋಭಾವವನ್ನು ಬದಲಾಯಿಸಿಕೊಳ್ಳದಿದ್ದರೆ ಘೋರವಿಪತ್ತನ್ನು ಎದುರಿಸದೆ ಗತ್ಯಂತರವಿಲ್ಲ, ಫಲಿತಾಂಶ ಉಭಯನಷ್ಟ.

ಈ ಒಂದು ಸಮಸ್ಯೆಯ ಸುಳಿಯಲ್ಲಿ ಭಾರತ ಎಂದಿನಿಂದಲೂ ಸಿಕ್ಕು ಪೇಚಾಡುತ್ತ ಸಾಗಿಬಂದಿದ್ದರೆ, ಇತ್ತೀಚಿನ ಕಾಶ್ಮೀರ, ಪಂಜಾಬ, ಅಸ್ಸಾಂ ರಾಜ್ಯಗಳಲ್ಲಿ ತಲೆದೋರಿರುವ ಬಿಕ್ಕಟ್ಟಿನಿಂದ ತತ್ತರಿಸತೊಡಗಿದೆ. ಈ ಸಮಸ್ಯೆಗಳೆಲ್ಲ ಹುಟ್ಟಿ ಬೆಳೆದು

(47 ನೇ ಪುಟ ನೋಡಿ)

# ನ ವ ನೀ ತ

(ಸಂಸ್ಕೃತ ಶ್ಲೋಕಗಳ ಕನ್ನಡ ಭಾವಾನುವಾದ)

ಶೈಲೇ ಶೈಲೇ ನ ಮಾಣಿಕ್ಯಂ ಮೌಕ್ತಿಕಂ ನ ಗಜೇ ಗಜೇ ।
ಸಾಧವೋ ನ ಹಿ ಸರ್ವತ್ರ ಚಂದನಂ ನ ವನೇ ವನೇ ॥

ಗಿರಿ ಗಿರಿಗಳಲ್ಲಿಲ್ಲ ಮುತ್ತು ರತ್ನದ ಗಣಿಯು
ಕರಿ ಕರಿಗಳಲ್ಲಿರದು ಮಾಣಿಕ್ಯ ಮಣಿಯು
ಸಾಧು ಸಂತರು ಸಿಗರು ಎಲ್ಲೆಂದರಲ್ಲಲ್ಲಿ
ಚಂದನದ ತರುವಿರದು ವನವನಗಳಲ್ಲಿ.

  

ಕನ್ಯಾ ವರಯತೇ ರೂಪಂ ಮಾತಾ ವಿತ್ತಂ ಪಿತಾ ಶ್ರುತಮ್
ಬಾಂಧವಾಃ ಕುಲಮಿಚ್ಛಂತಿ ಮೃಷ್ಟಾನ್ನಮಿತರೇ ಜನಾಃ॥

ವಧುವಿಗಾದರೊ ವರನ ರೂಪದಾಸೆ
ತಾಯಿಗೋ ವರನ ಸಿರಿ, ತಂದೆಗವನ ವಿದ್ಯೆ
ಬಂಧುಗಳು ಬಯಸುವರು ವರನ ಕುಲವನ್ನು
ಉಳಿದವರು ಮೃಷ್ಟಾನ್ನದೂಟವನ್ನು.

  

ಅನಭ್ಯಾಸೇ ವಿಷಂ ವಿದ್ಯಾ ಅಜೀರ್ಣೇ ಭೋಜನಂ ವಿಷಂ
ವಿಷಂ ಸಭಾ ದರಿದ್ರಸ್ಯ ವೃದ್ಧಸ್ಯ ತರುಣೀ ವಿಷಮ್ ॥

ಬರೆಯದಿರೆ–ಓದದಿರೆ ಪಾಠ ವಿಷವು
ಅರಗದಿದ್ದರೆ ಅಮೃತದೂಟ ವಿಷವು
ಹೆಡ್ಡನಿಗೆ ಜ್ಞಾನಿಗಳ ಕೂಟ ವಿಷವು
ವೃದ್ಧನಿಗೆ ತರುಣಿಯೊಡನಾಟ ವಿಷವು.

" ಕಾವ್ಯಸುಧಾಪ್ರಿಯ " *(ಕೆ. ಜಿ. ರಂಗಯ್ಯ)*

## ಕ್ಷೇತ್ರವಾರ್ತೆ ಗ್ರಾಮಾಂತರ ಬಸವ ಜಯಂತಿ

**—ಸಂಗ್ರಹ: ಹೆಚ್. ವಿ. ವೀರಭದ್ರಯ್ಯ**

ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕಳೆದ ಐದು ವರ್ಷಗಳಿಂದಲೂ ಗ್ರಾಮಾಂತರ ಪ್ರದೇಶಗಳಲ್ಲಿ ಭಗವಾನ್ ಬಸವಣ್ಣನವರ ಜಯಂತಿ ಉತ್ಸವವನ್ನು ಆಚರಿಸುತ್ತಾ ಬರುತ್ತಿದ್ದಾರೆ. ಜನತೆಯಲ್ಲಿ ಧರ್ಮಜಾಗೃತಿ ಈ ಉತ್ಸವದ ಮೂಲೋದ್ದೇಶ. ಬಸವ ತತ್ವ ಪ್ರಚಾರದಿಂದ ಜನತೆ ಮತ್ತು ಲೋಕ ಕಲ್ಯಾಣದ ಮಹತ್ತರ ಧ್ಯೇಯಸಾಧನೆ. ವಿಶ್ವ ಮಾನವ ಪ್ರೇಮಿ ಬಸವಣ್ಣನವರು ಬಾಳಿ ಬದುಕಿದ ಆದರ್ಶವನ್ನು ಜನತೆಗೆತೋರಿ, ಆ ಮಹಾ ಬೆಳಕಿನ ಮಾರ್ಗದಲ್ಲಿ ಮಾನವ ಮಾನವನಾಗಿ ಬದುಕಬೇಕೆನ್ನುವುದೇ ಶ್ರೀ ಶ್ರೀಗಳವರ ಉತ್ಕಟಾಕಾಂಕ್ಷೆ. ಈ ದಿಸೆಯಲ್ಲಿ ಪ್ರತಿ ವರ್ಷದಂತೆ ಈ ವರ್ಷವೂ ಗ್ರಾಮಾಂತರ ಪ್ರದೇಶದಲ್ಲಿ ಅಣ್ಣ ಬಸವಣ್ಣನವರ ಜಯಂತಿ ಉತ್ಸವವನ್ನು ಆಚರಿಸುತ್ತಾ ಪೂಜ್ಯರು ಬಂದಿದ್ದಾರೆ. ಪೂಜ್ಯರು ಹಮ್ಮಿಕೊಂಡಿರುವ ಉತ್ಸವ ಕಾರ್ಯಕ್ರಮ 24 ಗಂಟೆಗಳು ನಿರಂತರವಾಗಿ ನಡೆಯುಬೇಕು. ಪ್ರಾತಃಕಾಲ ಷಟ್ಥ್ಸಲ ಧ್ವಜಾರೋಹಣ, ಪೂಜ್ಯ ಬಸವಣ್ಣನವರ ಭಾವ ಚಿತ್ರ ಅನಾವರಣ ಮತ್ತು ಉತ್ಸವ. ಬೆಳಗಿನ ಹನ್ನೊಂದು ಘಂಟೆಯಿಂದ ಎರಡು ಘಂಟೆಯವರೆಗೆ ಮೊದಲ ಅಧಿವೇಶನ. ಅಧಿವೇಶನದಲ್ಲಿ ಅನೇಕ ವಿದ್ವಾಂಸರ ಮತ್ತು ಹರಗುರು ಚರಮೂರ್ತಿಗಳವರಿಂದ ಬಸವಣ್ಣನವರ ಜೀವನ ಸಂದೇಶಗಳನ್ನು ಭಾಷಣ ಮತ್ತು ಪ್ರವಚನಗಳ ಮೂಲಕ ಜನತೆಗೆ ತಿಳಿಸುವುದು. ಕೊನೆಯಲ್ಲಿ ಶ್ರೀ ಶ್ರೀಗಳವರ ಆಶೀರ್ವಚನ. ಮಧ್ಯಾಹ್ನ 2 ರಿಂದ 4 ರವರೆಗೆ ಶ್ರೀ ಶ್ರೀಗಳವರ ಪೂಜಾ ಕಾರ್ಯಕ್ರಮ ಮತ್ತು ಸಮಾರಂಭಕ್ಕೆ ಬಂದ ಭಕ್ತರಿಗೆ ಪ್ರಸಾದ ವಿನಿಯೋಗ. ಸಾಯಂಕಾಲ 4 ಘಂಟೆಯಿಂದ ದ್ವಿತೀಯ ಅಧಿವೇಶನ ಆರಂಭ. ಕೊನೆಯಲ್ಲಿ ಶ್ರೀ ಶ್ರೀಗಳವರಿಂದ ಆಶೀರ್ವಚನ ರಾತ್ರಿ 8 ಘಂಟೆಯವರೆಗೂ ನಡೆಯುತ್ತದೆ, ನಂತರ ಪೂಜಾ ಪ್ರಸಾದ ವಿನಿಯೋಗ. ರಾತ್ರಿ ಹತ್ತು ಘಂಟೆಗೆ ಪೂಜ್ಯರ ಅಮೂಲ್ಯ ಸಲಹೆ ಪ್ರೋತ್ಸಾಹಗಳಿಂದ ಪೋಷಿತವಾದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಲಿಯವರಿಂದ ಶ್ರೀ ಜಗಜ್ಜ್ಯೋತಿ ಬಸವೇಶ್ವರರ ನಾಟಕ ಪ್ರದರ್ಶನ. ಅಖಂಡವಾಗಿ 8 ಘಂಟೆಗಳ ಕಾಲ ಪ್ರದರ್ಶಿತವಾಗುವ ವರ್ಣರಂಜಿತ ವಸ್ತ್ರಾಲಂಕಾರಗಳಿಂದ ಕೂಡಿದ ಸಂಗೀತ ನೃತ್ಯ ನಾಟಕವನ್ನು ನೋಡಲು ಬರುವ ಜನಸಂದಣಿ ಸಹಸ್ರಾರು ಮಂದಿ, ಒಮ್ಮೆಯಿಂದ ಕುಳಿತು ರಾತ್ರಿಯೆಲ್ಲಾ ನಾಟಕವನ್ನು ನೋಡಿ ಆನಂದಿಸುತ್ತಾರೆ. ನಾಟಕಕ್ಕೆ ಬರುವ ಆ ಜನಸಮೂಹ ಹಳ್ಳಿ ಹಳ್ಳಿಗೂ ಪೈಪೋಟಿಯೆನ್ನುವಂತೆ ಸೇರುತ್ತದೆ.

ಸುಮಾರು ಹದಿನೈದು ಇಪ್ಪತ್ತು ಸಹಸ್ರ ಮಂದಿ ಪ್ರೇಕ್ಷಕ ವರ್ಗದಿಂದ ಕೂಡಿದ ಇಡೀ ಮೈದಾನವೆಲ್ಲ ಜನಮಯವಾಗುತ್ತದೆ. ನಾಟಕ ನೋಡಿ ಮರಳುವಾಗ ಒಂದು ಅನಿರ್ವಚನೀಯವಾದ ಮತ್ತೊಂದು ಲೋಕಕ್ಕೆ ಒಯ್ದವರಂತೆ ಮರಳುತ್ತಾರೆ ಇಡೀ ಜನಸ್ತೋಮ. ಇದು ಶ್ರೀ ಶ್ರೀಗಳವರ ಬಸವ ಜಯಂತ್ಯುತ್ಸವದ ಕಾರ್ಯಾಚರಣೆಯ ವೈಖರಿ.

ಹೀಗಾಗಿ ಪ್ರಸಕ್ತ ಸಾಲಿನಲ್ಲಿ ಸುಮಾರು ಇಪ್ಪತ್ತು ಸ್ಥಳಗಳಲ್ಲಿ ಜಯಂತಿ ಉತ್ಸವವನ್ನು ಆಚರಿಸಲಾಗಿದೆ. ಅವುಗಳ ಪೈಕಿ ಕೆಲವು ಸ್ಥಳಗಳಲ್ಲಿ ಸೇರಿದ್ದ ಜನಸಂದಣಿಯನ್ನು ಕುರಿತು ಶ್ರೀ ಶ್ರೀಗಳವರು ಮಾಡಿದ ಆಶೀರ್ವಚನವನ್ನು ಸಂಕ್ಷಿಪ್ತವಾಗಿ ಈ ಕೆಳಗೆ ಕೊಡಲಾಗಿದೆ.

(10-4-83 ರಂದು ನೆಲಮಂಗಲ ತಾಲ್ಲೂಕು ಕಂಬಾಳು ಮಠದಲ್ಲಿ
(ಶ್ರೀ ಶ್ರೀಗಳವರ ಆಶೀರ್ವಚನ)

ಇದು ವಿಜ್ಞಾನ ಯುಗ, ವಿಚಾರ ಯುಗ, ಸಾಹಸ ಪ್ರವೃತ್ತಿಯ ಯುಗ. ಭೀಕರ ಬಡತನವನ್ನು ರಾಷ್ಟ್ರ ಅನುಭವಿಸುತ್ತಿರುವ ವಿಷಮ ಕಾಲ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಬಸವ ಜಯಂತಿಯ ಆಚರಣೆಯ ಅಗತ್ಯವಿದೆಯೆ? ಎಂಬ ಪ್ರಶ್ನೆ ಏಳುವುದು ಸಹಜ, ಸ್ವಾಭಾವಿಕ. ಜೀವನ ಇಂದು ಹಲವಾರು ಸಮಸ್ಯೆಗಳ ಹುತ್ತವಾಗಿ, ಪರಿಹಾರ ಕಂಡುಕೊಳ್ಳುವ ಬಗೆ ಹೇಗೆ ಎಂದು ಚಿಂತಿಸುವಂತಾಗಿದೆ. ಬಸವಣ್ಣನವರ ಜೀವನ ಸಂದೇಶವನ್ನು ಅನುಸರಿಸುವುದರಿಂದ ಇವೆಲ್ಲವುಗಳಿಗೆ ಪರಿಹಾರ ಕಂಡುಕೊಳ್ಳಬಹುದಾಗಿದೆ. ಬಸವಣ್ಣನವರು ಒಂದು ಸಮಾಜದ, ಒಂದು ರಾಷ್ಟ್ರದ ವ್ಯಕ್ತಿಯಲ್ಲ. ಅವರು ವಿಶ್ವಮಾನವರು. ಅವರು ತೋರಿದ ಮಾರ್ಗ ಜಗತ್ತನ್ನೇ ಆತ್ಮೀಯಭಾವದಿಂದ ಆಲಿಂಗಿಸಿಕೊಳ್ಳುವ ಪ್ರೀತಿಯ ಮಾರ್ಗ. "ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ, ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯ" ಎಂದರು. ನಮ್ಮಲ್ಲಿ ಎರಡು ವಿಧದ ಸಾಧಕರನ್ನು, ಆದರ್ಶ ಜೀವಿಗಳನ್ನು, ಆಚಾರ್ಯರನ್ನು ಕಾಣುತ್ತೇವೆ. ಎತ್ತರಕ್ಕೆ ಬೆಳೆದು ಗಿರಿಶಿಖರದ ಮೇಲೆ ನಿಂತು ಧರ್ಮೋಪದೇಶ ಮಾಡುವವರದು ಒಂದು ಶ್ರೇಣಿ, ಮತ್ತೊಂದೆಂದರೆ ತಾವೂ ಬೆಳೆದು ವಿಶ್ವದೆತ್ತರಕ್ಕೆ, ದೀನ, ದಲಿತರ ಕಣ್ಣೀರನ್ನು ಕಂಡು ಕರಗಿ, ಅವರ ಉದ್ಧಾರಕ್ಕೆ ತಮ್ಮ ಜೀವನವನ್ನು ಅರ್ಪಿಸಿಕೊಂಡು, ಇಡೀ ಜಿಟ್ಟವನ್ನೇ ಹೊತ್ತು ನಿಲ್ಲುವ ಆದರ್ಶ ಪುರುಷರದು. ಬಸವಣ್ಣನವರದು ಜಿಟ್ಟವನ್ನು ಹೊತ್ತು ಲೋಕ ಜೀವನದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಆದರ್ಶ. ಬಸವಣ್ಣನವರು ಸಮಗ್ರ ಕ್ರಾಂತಿಯ ಮೂಲಪುರುಷರು.

(48 ನೇ ಪುಟ ನೋಡಿ)

# ಸಿದ್ಧಾರ್ಥ ಬುದ್ಧನಾದ

—ಬಿ. ಎಸ್. ತಿಮ್ಮೋಲಿ

ಭಾರತದ ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಜನಜೀವನವನ್ನು ಬೆಳಗಲು ಜನಿಸಿಬಂದ ಅನೇಕ ಮಹಾಪುರುಷರಲ್ಲಿ ಭಗವಾನ್ ಬುದ್ಧನೂ ಒಬ್ಬ. ಜನತೆಗೆ ಸನ್ಮಾರ್ಗವನ್ನು ತೋರಿ, ಅವರ ಕಣ್ಣೀರನ್ನು ತೊಡೆಯಲು ಆತನು ತನ್ನ ಬಾಳನ್ನೇ ಪಣವಾಗಿಟ್ಟ ಮಹಾನ್ ವ್ಯಕ್ತಿ. ಆತನು ಹುಟ್ಟಿ, ಬೆಳೆದು, ತಾನು ಕಂಡ ಸತ್ಯವನ್ನು ಜನತೆಗೆ ಬೋಧಿಸಿದ ಭಾರತದ ನೆಲದಲ್ಲಿ ಇಂದು ಬುದ್ಧ ಧರ್ಮವು ಬಾಳಿಲ್ಲವಾದರೂ ವಿಶ್ವದ ಹಲವಾರು ರಾಷ್ಟ್ರಗಳಲ್ಲಿ ಬೌದ್ಧಧರ್ಮವು ಅಸಂಖ್ಯ ಅನುಯಾಯಿಗಳನ್ನು ಪಡೆದಿದೆ.

ಭಾರತವು ಧರ್ಮದ ತವರು. ವಿವಿಧ ಮತ ಪಂಥಗಳು ಬಾಳಿಬೆಳಗಿದ ಬೀಡು. ಎರಡು ಸಾವಿರ ವರುಷಗಳಿಗಿಂತ ಪೂರ್ವದಲ್ಲಿಯೇ ವಿಶ್ವಮಾನವ, ಅಹಿಂಸಾ ಮೂರ್ತಿ ಗೌತಮ ಬುದ್ಧನು ಜನಿಸಿದ ನಾಡು. ಕಾಲಕಾಲಕ್ಕೆ ಸಮಾಜದಲ್ಲಿ ಸಂಭವಿಸಿದ ಅವ್ಯವಸ್ಥೆಗಳನ್ನು ಸರಿಪಡಿಸಿ ಜನತೆಗೆ ಸತ್ಯಮಾರ್ಗವನ್ನು, ನೀತಿ ಮಾರ್ಗವನ್ನು ತೋರಿಸಿದ ಮಹಾ ಪುರುಷರ ಜೀವನ ಚರಿತ್ರೆಗಳು ಭವ್ಯ ಭಾರತದ ಇತಿಹಾಸದ ಪುಟಗಳನ್ನು ಅಲಂಕರಿಸಿವೆ. ಜನರು ತಮ್ಮ ಜೀವನದಲ್ಲಿ ಒಂದಿಲ್ಲೊಂದು ದುಃಖ ದುಮ್ಮಾನ, ರೋಗರುಜಿನ, ಸಾವು ನೋವುಗಳಿಂದ ತತ್ತರಿಸಿ ದಿಗ್ಭ್ರಾಂತರಾದಾಗ ಅವರ ಜೀವನ ಪಥದಲ್ಲಿ ದಾರಿದೀಪವಾಗಿ ಬೌದ್ಧ ಧರ್ಮ ಬಂದಿತೆಂದು ಇತಿಹಾಸ ಹೇಳುತ್ತದೆ. ಸಾಮಾನ್ಯವಾಗಿ ಧರ್ಮವೆಂದರೆ ನೈತಿಕ ವ್ಯವಸ್ಥೆಯೆಂದು ಹೇಳಬಹುದು. ಅದು ಸಿದ್ಧಾಂತವಲ್ಲ. ಸಾಕ್ಷಾತ್ಕಾರವೆಂದು ಹೇಳುವವರೂ ಉಂಟು. ಧರ್ಮವು ಅತೀಂದ್ರಿಯ ಅನುಭವವೆಂದು ಅನುಭಾವಿಗಳು ತಿಳಿಸುತ್ತಾರೆ. ಈ ಒಂದು ಅರ್ಥವನ್ನು ಗಮನದಲ್ಲಿಟ್ಟುಕೊಂಡು, ಗೌತಮ ಬುದ್ಧನ ಜೀವನ ಹಾಗೂ ಸಾಧನೆ ಕುರಿತು ಚಿಂತನ ಮಾಡಬಹುದಾಗಿದೆ.

ಮೇ ಹದಿನೆಂಟರಂದು ಬುದ್ಧ ಪೂರ್ಣಿಮಾ. ಈ ಶುಭ ದಿನವನ್ನೇ ಗೌತಮ ಬುದ್ಧನ ಜನ್ಮ ವಿಶ್ವದಾದ್ಯಂತ ಆಚರಿಸಲಾಗುತ್ತಿದೆ. ಇದು ಅವನು ಮಾನವರಿಗೆ ನೀಡಿದ ಅಮರ ಸಂದೇಶವನ್ನು ಮೆಲಕು ಹಾಕುತ್ತಾ "ಆಂತರಿಕ ಅವಲೋಕನ ಮಾಡುವ ಸುದಿನವೆಂದು ಹೇಳಬಹುದು. ಅಂತಹ ಮಹಾಪುರುಷನ ಜೀವನಚರಿತ್ರೆ ನಮ್ಮ ಜೀವನಕ್ಕೆ ಪ್ರೇರಣೆಯಾಗಲಿ.

ಹಿಮಾಲಯದ ಅಂಚಿನಲ್ಲಿ, ಅಂದರೆ (ಈಗಿನ ಭಾರತ ನೇಪಾಳ ಗಡಿ ಪ್ರದೇಶದಲ್ಲಿ) ಶಾಕ್ಯವಂಶದ ಅರಸರ ಶುದ್ಧೋಧನ ರಾಜ್ಯವಾಳುತ್ತಿದ್ದನು. ಅವನ ಮಮತೆಯ ಪುತ್ರನಾಗಿ ಕ್ರಿ. ಪೂರ್ವ 566 ರಲ್ಲಿ, ಗೌತಮನು, (ಸಿದ್ಧಾರ್ಥನು) ಲುಂಬಿನಿ ಬನದಲ್ಲಿ ಜನಿಸಿದನು. ಈ ಜನ್ಮ ಸ್ಥಳದ ಬಗ್ಗೆ ಅಶೋಕನು ನಿಲ್ಲಿಸಿದ ಶಿಲಾಶಾಸನವು ತಿಳಿಸುತ್ತದೆ, ಸಿದ್ಧಾರ್ಥನು ಇತರ ರಾಜಪುತ್ರರಂತೆ ಸುಖಲೋಲುಪತೆಯಲ್ಲಿ ಹಾಯಾಗಿ ಜೀವನವನ್ನು ಕಳೆಯಬಹುದಾಗಿತ್ತು. ಆದರೆ ದೈವೇಚ್ಛೆಯೇ ಬೇರೆಯಾಗಿತ್ತು. ಮಗನು ಒಂದಿಲ್ಲೊಂದು ದಿನ ರಾಜ್ಯಪಟ್ಟವನ್ನು ತೊರೆದು ಸಂನ್ಯಾಸಿಯಾಗುತ್ತಾನೆ.—ಎಂಬ ಭವಿಷ್ಯವಾಣಿಗೆ ಹೆದರಿ ತಂದೆ ಶುದ್ಧೋಧನನು ಮಮತೆಯ ಸಂಕೋಲೆಯುಲ್ಲಿ ಪೈತುಂಬಾ ಕಣ್ಣಾಗಿ ರಕ್ಷಿಸುವ ವ್ಯವಸ್ಥೆ ಮಾಡಿದ್ದನು. ಮುದ್ದು ಮಗನ ದೃಷ್ಟಿಗೆ ವಯೋವೃದ್ಧ ರೋಗಿ ಮತ್ತು ಜೀವನದ ಸಾವುನೋವು, ಕಷ್ಟ ಕಾರ್ಪಣ್ಯಗಳು ಬೀಳದಂತೆಯೂ ಅತಿ ಎಚ್ಚರಿಕೆ ವಹಿಸಿದ್ದನು. ಆದರೆ ವಿಧಿನಿಯಮ ತಪ್ಪುವಂತಿರಲಿಲ್ಲ. ಏನು ಆಗಬೇಕಾಗಿತ್ತೋ ಅದು ಆಗಿಯೇ ಹೋಯಿತು.

ರಾಜವೈಭವದಲ್ಲಿ ಮೆರೆಯುತ್ತಿದ್ದ ಸಿದ್ಧಾರ್ಥನು ಅದು ಹೇಗೋ ನಿಷೇಧವಾದ ಈ ದೃಷ್ಟಾಂತಗಳನ್ನು ಕಂಡು ಅತಿ ಕಳವಳಗೊಂಡನು. ಅವನ ಮನಸ್ಸು ಮಮ್ಮಲ ಮರುಗಿತು. ಜೀವನದ ಸಂಗಾತಿಯಾದ ದುಃಖದ ರಹಸ್ಯ ಅವನ್ನು ವಿಶ್ರಮಿಸಲು ಬಿಡಲಿಲ್ಲ. ಈ ಕ್ಷಣಿಕ ಸುಖಗಳಿಗಿಂತ, ಬೇರೆ ಯಾವುದೋ ಒಂದು ಅವ್ಯಕ್ತ ಆನಂದ, ನೆಮ್ಮದಿಗಾಗಿ ಅವನ ಮನಸ್ಸು ಮಿಡುಕಿತು; ಜೀವ ಬಯಸಿತು. ಬುದ್ಧನ ಆಗಿನ ಮನದ ಅಳಲನ್ನು ಅರ್ಥಮಾಡಿಕೊಳ್ಳುವಾಗ "ದುಃಖದುಮ್ಮಾನಗಳ ಬಗ್ಗೆ ಹೇಳುವ ಹಾಡುಗಳೇ ಮಧುರ ಗೀತೆಗಳು" ಎಂಬ ಆಂಗ್ಲ ಕವಿ ಶೆಲ್ಲಿಯ ಪದ್ಯ ನೆನಪಾಗುತ್ತದೆ. ಕತ್ತಲಲ್ಲಿ ಹೊರಳಾಡುತ್ತಿರುವ ಕಂದ ತನ್ನ ಮನೆಗೆ ಹೋಗಲು ಕೂಗಾಡಿದಂತೆ, ಅನಂತತೆಯಿಂದ ಬೇರ್ಪಟ್ಟ ನಾವು ಅದರೊಂದಿಗೆ ಲೀನವಾಗಲು ಬಯಸುತ್ತೇವೆ ಎಂದು ದಾರ್ಶನಿಕರು ತಿಳಿಸಿದ್ದು ಇಲ್ಲಿ ಔಚಿತ್ಯಪೂರ್ಣವೆನಿಸುತ್ತದೆ.

ಯುವರಾಜ ಸಿದ್ಧಾರ್ಥ ಯಾವುದೋ ಒಂದು ಅವ್ಯಕ್ತ ಬಯಕೆಗಾಗಿ ಹಂಬಲಿಸುತ್ತಿದ್ದನು. ಅವನು ಆಗಿನ ಕಾಲದ ಆಗುಹೋಗುಗಳ ಸಂಪ್ರದಾಯದ ಸುಳಿಯಲ್ಲಿರಲು ಬಯಸಲಿಲ್ಲ. ಉದಾತ್ತ ಬಯಕೆಯನ್ನು ಈಡೇರಿಸಿಕೊಳ್ಳಲು ಸುಖ ಸಂಪತ್ತು ಸತ್ವರಹಿತ ಭ್ರಮೆಗಳೆಂಬ ಅರಣ್ಯ ಬೇಧಿಸಿ ಹೋಗಬೇಕೆಂದು ಮನಸ್ಸು ನಿರ್ಧರಿಸಿತು. ಜೀವನದಲ್ಲಿ ಅಧಿಕಾರ. ಸಂಪತ್ತು ಸುಖಗಳಿಗೆ ಮೋಹಗೊಳ್ಳದೆ ಉಪನಿಷತ್ತಿನಲ್ಲಿ ಹೇಳಿದಂತೆ "ಕತ್ತಲಿನಿಂದ ಬೆಳಕಿನೆಡೆಗೆ, ಅಸತ್ಯದಿಂದ ಸತ್ಯದೆಡೆಗೆ. ಮರಣದಿಂದ ಅಮರತ್ವದೆಡೆಗೆ ಸಾಗಲು ಇಚ್ಛಿಸಿದನು. ಅದಕ್ಕಾಗಿಯೇ ಒಂದು ಮಧ್ಯರಾತ್ರಿ ಸತಿ ಸುತರನ್ನು ಬಿಟ್ಟು ತನ್ನ ಪಥವನ್ನು ಮುಂದುವರಿಸಿದನು. ಸಿದ್ಧಾರ್ಥನ ಸಂಸಾರಪರಿ

ತ್ಯಾಗದ ಚಿತ್ರವನ್ನು ಅತಿ ಸುಂದರವಾಗಿ ಕಾವ್ಯಮಯವಾಗಿ ಆಂಗ್ಲ ಕವಿ ಸರ್ ಎಡ್ವಿನ್ ಆರ್ನಾಳ್ ಆಂಗ್ಲ-ಭಾಷೆಯಲ್ಲಿರುವ ಲಾಯಿಟ್ ಆಫ್ ಏಷಿಯಾದಲ್ಲಿ ಬಣ್ಣಿಸಿದ್ದಾನೆ.

ಗೌತಮನು ಮಾನವನೇ ಮಾನವನ ಹಾಗೂ ಇತರ ಕ್ರಿಮಿಕೀಟಗಳ ಕಡು ವೈರಿಯಾಗಿರುವುದನ್ನು ಕಂಡು ಬೇಸರಗೊಂಡನು. ಇದಕ್ಕೆ ಶಾಶ್ವತ ಪರಿಹಾರ ಕಂಡು ಕೊಳ್ಳಲು "ಆಂತರಿಕ ಬೆಳಕನ್ನು" ಕಾಣಲು ಬಯಸಿ ದೇಹ ದಂಡಿಸಿ 40 ದಿನಗಳ ವರೆಗೆ ಘೋರ ತಪಸ್ಸನ್ನು ಮಾಡಿದನು. ಭೋಧಿವೃಕ್ಷದಡಿಯಲ್ಲಿ ತಪಸ್ಸು ಮಾಡುತ್ತಿದ್ದ ಗೌತಮನಿಗೆ ಒಮ್ಮಿಂದೊಮ್ಮೆ ಜ್ಞಾನದ ಬೆಳಕೊಂದು ಮಿಂಚಿನೋಪಾದಿಯಲ್ಲಿ ಸಂಚರಿಸಿದಂತಾಗಿ ಆ ಕ್ಷಣವೇ ಗೌತಮನು ಬುದ್ಧನಾದನು. ಅವನ ಸಂದೇಶವೇ 'ದಮ್ಮಪದ' ಅಂದರೆ ಧರ್ಮಪಥವಾಯಿತು.

ಗೌತಮಬುದ್ಧನು, ಜ್ಞಾನೋದಯದ ಬೆಳಕಿನಲ್ಲಿ ತಾನು ಹಿಂದೆ ಎಂದೆಂದೂ ಕಾಣದ ನಾಲ್ಕು ಕಟುಸತ್ಯಗಳನ್ನು ಕಂಡನು. ಇವುಗಳಿಗೆ ಬೌದ್ಧ ಸಿದ್ಧಾಂತದಲ್ಲಿ ಆರ್ಯಸತ್ಯವೆಂದೂ ಹೆಸರು. ಜೀವನವು ದುಃಖಮಯ, ದುಃಖವೇ ಮೊದಲನೆಯ ಸತ್ಯವಾಗಿದೆ. ಈ ದುಃಖಕ್ಕೆ ಕಾರಣ ಇದ್ದೇಯಿದೆ. ಇದೇ ದುಃಖಸಮುದಾಯ ಇದು ಎರಡನೇ ಸತ್ಯವನಿಸಿದೆ. ದುಃಖವನ್ನು ನಿವಾರಿಸಲು ಸಾಧ್ಯವಿದ್ದು ಅದೇ ದುಃಖ ನಿರೋಧ ಎಂಬ ಮೂರನೇ ಸತ್ಯವಾಗಿದೆ. ದುಃಖ ನಿವಾರಣೆಗೆ ಮಾರ್ಗಗಳಿವೆ. ಅವುಗಳೇ ದುಃಖನಿರೋಧ. ಗಾಮಿನಿ ಪ್ರತಿಪತ್ ಎಂಬುದು ನಾಲ್ಕನೇ ಸತ್ಯ. ಬುದ್ಧಧರ್ಮದ ಪ್ರಕಾರ ಈ ನಾಲ್ಕನೇ ಸತ್ಯದ ಅನ್ವೇಷಣೆಗಾಗಿ ಎಂಟು ಮಾರ್ಗಗಳಿವೆ ಅವುಗಳೆಂದರೆ : 1) ಸಮ್ಯಕ್ ದೃಷ್ಟಿ, 2) ಸತ್‌ಸಂಕಲ್ಪ, 3) ಸತ್ ವಾಕ್, 4) ಸತ್‌ಕರ್ಮಾಣತ್, 5) ಸತ್ ಆಜೀವ, 6) ಸದವ್ಯಾಯಾಮ, 7) ಸಮ್ಯಕ್ ಸ್ಮೃತಿ, 8) ಸಮ್ಯಕ್ ಸಮಾಧಿ.

**ಅಷ್ಟ ಮಾರ್ಗಗಳು :** ಈ ಅಷ್ಟ ಮಾರ್ಗಗಳು ಹೂವಿನ ಹಾಸಿಗೆಯೇನಲ್ಲ. ಸ್ಪರ್ಶ, ವೇದನೆ, ತೃಷ್ಣೆ ಮೊದಲಾದ ಹನ್ನೆರಡು ಕೊಂಡಿಯ ಜೀವನ ಚಕ್ರವನ್ನು ಗೆಲ್ಲುವುದು ಅತಿ ಕಠಿಣ. ಏಕೆಂದರೆ ಇವು ಚೇಳಿನ ಕೊಂಡಿಯಷ್ಟೇ ತೀಕ್ಷ್ಣ. ಈ ಕೊಂಡಿಗಳಿಂದ ಕಳಚಿಕೊಂಡು ಹೊರಬಂದಾಗಲೇ ದುಃಖ ನಿವಾರಣೆ ಸಾಧ್ಯವೆಂದು ಗೌತಮ ಬುದ್ಧನು ಪ್ರತಿಪಾದಿಸಿದನು.

ಭಗವಾನ್ ಬುದ್ಧನು ತಾನು ಕಂಡ ಸತ್ಯವನ್ನು ಪ್ರಥಮವಾಗಿ ಸಾರಾನಾಥದಲ್ಲಿ ಪ್ರಕಟಪಡಿಸಿದನಲ್ಲದೆ, ಭಾರತದ ಉದ್ದಗಲಕ್ಕೂ ಸಂಚರಿಸಿ ಅಂಹಿಸಾ ತತ್ವ ಪ್ರಚುರಗೊಳಿಸಿ ಲಕ್ಷಾಂತರ ಜನ ಅನುಯಾಯಿಗಳನ್ನಾಗಿ ಮಾಡಿದನು. ಬುದ್ಧನ ಅಮರ ಸಂದೇಶಕ್ಕೆ ಜನಸಾಮಾನ್ಯರಷ್ಟೇ ಅಲ್ಲ ಅರಸು ಅಧಿಪತಿಗಳು ತಲೆದೂಗಿದರು. ತತ್ವದ

ಪಾಲನೆಯಲ್ಲಿ ತಲ್ಲೀನರಾದರು. ಬೌದ್ಧ ಧರ್ಮವು ಎಲ್ಲ ಮತೀಯರಿಗೂ ಹಾಗೂ ವರ್ಗದವರಿಗೂ ಅನ್ವಯವಾದುದರಿಂದ ಬೇಗನೆ ವಿಶ್ವವ್ಯಾಪಿ ಧರ್ಮವಾಗಿ ಬೆಳೆಯಿತು. ಈಗಲೂ ಶ್ರೀಲಂಕಾ, ಬರ್ಮಾ, ಚೀನಾ, ಜಪಾನ್, ಟಿಬೇಟ್, ಮೊದಲಾದ ದೇಶಗಳಲ್ಲಿ ಅಸಂಖ್ಯಾತ ಬೌದ್ಧ ಅನುಯಾಯಿಗಳು ಇದ್ದಾರೆ.

**ಅಮರ ಸಂದೇಶ :** ಗೌತಮ ಬುದ್ಧನು ಅಮರ ಸಂದೇಶಗಳ 'ಸಂಕಲನ' ವಾ 'ದಮ್ಮಪದ'ವು ಪಾಲಿ ಭಾಷೆಯಲ್ಲಿದ್ದು ವಿಶ್ವದ ಶ್ರೇಷ್ಠ ಧರ್ಮಗ್ರಂಥಗಳಲ್ಲೊಂದಾಗಿದೆ. ಈಗಲೂ ಬೈಬಲ್ ಕುರಾನ್ ಭಗವದ್ಗೀತೆ, ರಾಮಾಯಣ ಮುಂತಾದ ಮೇರು ಕೃತಿಗಳ ಸಾಲಿನಲ್ಲಿ ಮೆರೆಯುತ್ತದೆ. ದಮ್ಮಪದ ಗ್ರಂಥವನ್ನು ಅಧ್ಯಯನ ಮಾಡು ವಾಗ ಧರ್ಮದ ವ್ಯಾಪಕ ಅರ್ಥದತ್ತ ಗಮನ ಹರಿಸಬೇಕು. ಯಾವುದೇ ಧರ್ಮ ದಬೇರುಗಳು ಮಾನವನ ಮೂಲಭೂತ ಪ್ರವೃತ್ತಿಯಲ್ಲಿ ಸುಪ್ತವಾಗಿವೆ. "ಬಿಡು ಗಡೆಯ ಬಯಕೆ, ಸಂತೋಷದ ಅನ್ವೇಷಣೆ ಹಾಗೂ ಪರಿಪೂರ್ಣತೆಯ ಅಭಿಲಾಷೆ ಅವನ ಮೂಲ ಪ್ರವೃತ್ತಿಯ ಮೂರು ಮುಖಗಳು" ಅದೂ ಅಲ್ಲದೆ, ಮಾನವನ ಧಾರ್ಮಿಕ ಕಲ್ಪನೆ ಬೆಳೆಯಲು ಸುತ್ತಲಿನ ಪರಿಸರ, ಪರಿಸ್ಥಿತಿಗಳು ಸಹಾಯಕವಾ ದವು. ಒಂದೆಡೆ ಸೃಷ್ಟಿ ಸೌಂದರ್ಯದ ಲಾಸ್ಯ, ಮತ್ತೊಂದೆಡೆ ಮೃತ್ಯುವಿನ ಕ್ರೂರ ಹಾಸ್ಯ ಇವುಗಳಲ್ಲಿ ಅಗೋಚರ, ಅಗಾಧ ಚೈತನ್ಯ ಶಕ್ತಿಯಿದೆಯೆಂದು ಮನಗಂಡ ಮಾನವನು ಆ ಶಕ್ತಿಯ ಉಪಾಸನೆಗಾಗಿ ಹಲವಾರು ವಿಧಿವಿಧಾನಗಳನ್ನು ಬಳಸಿ ಹೀಗೆ ಅನುಕ್ರಮಿಸಿದ ಮಾರ್ಗವೇ ಧರ್ಮದ ಬೆಳವಣಿಗೆಯಾಗಿದೆ. ಈ ಒಂದು ವ್ಯಾಪಕವಾದ ಧಾರ್ಮಿಕ ಕಲ್ಪನೆಯ ಹಿನ್ನಲೆಯಲ್ಲಿ ಬೌದ್ಧ ಧರ್ಮದ ಬೆಳವಣಿಗೆ ಹಾಗೂ ಅದು ಬೀರಿದ ಪ್ರಭಾವವನ್ನು ಗುರುತಿಸಬಹುದಾಗಿದೆ. ಮಾನವ ಜೀವ ನದ ಮೂಲಭೂತ ಮೌಲ್ಯಗಳ ಅರಿವನ್ನು ಮಾಡಿಕೊಂಡ ಗೌತಮ ಬುದ್ಧನು ನೀಡಿದ ಧರ್ಮ ಸಂದೇಶ ಈಗಿನ ಸಂಕೀರ್ಣ ಸಮಾಜದಲ್ಲಿ ಶಾಂತಿ, ಪ್ರೇಮಗಳ ಸಂಜೀವಿನಿಯಾಗಬಲ್ಲದು.

**ಧರ್ಮಪದ ದರ್ಶನ :** ದುಃಖದಲ್ಲಿದ್ದವರನ್ನು ಕಂಡು ಅನುಕಂಪ ತೋರಿ ಅವರ ವೇದನೆಯನ್ನು ನಿವಾರಿಸುವುದೇ ಬೌದ್ಧ ಧರ್ಮದ ಜೀವಾಳವಾಗಿದೆ. ದೀನದಲಿ ತರ ಏಳಿಗೆಗಾಗಿ ಚಿಂತನ ಮಾಡುತ್ತಿರುವ ಪ್ರಸಕ್ತ ಸಮಾಜಕ್ಕೆ ಬುದ್ಧನು ನೀಡಿದ ಸಂದೇಶ ಇಂದಿಗೂ ಅನ್ವಯಿಸುತ್ತದೆ. ಆಗಿನ ಕಾಲದ ಪರಿಸರ ಪರಿಸ್ಥಿತಿಗಳನ್ನು ಕಂಡು ದುಃಖ ದುಮ್ಮಾನಗಳನ್ನು ನಿವಾರಿಸಲು, ಸೂಕ್ತ ಮಾರ್ಗವೊಂದನ್ನು ಸರಳ ವಾಗಿ ನಿರೂಪಿಸಿದ ಗ್ರಂಥ ಇದಾಗಿದೆ. ಮನುಷ್ಯನಿಗೆ ಭಯಭಕ್ತಿ ಇರಬೇಕು ಭಯದ ಅಂಕುರವಾಗದಿದ್ದರೆ ಧರ್ಮದಲ್ಲಿ ಆಸಕ್ತಿ ಬೆಳೆಯುವುದಿಲ್ಲ ಎಂಬ ಅಭಿಪ್ರಾ ಯವನ್ನು ಬುದ್ಧನು ತಳೆದಿದ್ದನು. ತನ್ನನ್ನು ಪಾಚಿಯಂತೆ ಸುತ್ತುಗಟ್ಟಿರುವ ದುಃಖ

ಗಳನ್ನು ಕಿತ್ತೊಗೆದು ಮಾನವನು ಜಾಗೃತವಾಗಬೇಕು. ಹಾಗೂ ಜನ್ಮ ಜನ್ಮಾಂತರಗಳ ಸುಳಿಯಲ್ಲಿ ಸಿಲುಕಿದ ಮಾನವನಿಗೆ ಚಿತ್ತಶುದ್ಧಿಬೇಕು. ಅದಕ್ಕಾಗಿಯೇ ಹಲವು ಹನ್ನೊಂದು ರೀತಿನೀತಿಗಳನ್ನು ಧರ್ಮಪದದಲ್ಲಿ ಬೋಧಿಸಿದೆ. ಕಾಯಾ ವಾಚಾ ಮನಸಾ ಶುದ್ಧವಿದ್ದು ನುಡಿದಂತೆ ನಡೆದು ಸಜ್ಜನರಾಗಿ ಸಿದ್ಧಿಯನ್ನು ಪಡೆಯಬೇಕೆಂದು ಗೌತಮ ಬುದ್ಧನು ಬೋಧಿಸಿದ್ದಾನೆ. ಹೀಗೆ ಈ ಧರ್ಮಗ್ರಂಥವು ಹೆಜ್ಜೆಹೆಜ್ಜೆಗೆ ಜನರಿಗೆ ಅಮೂಲ್ಯ ಉಪದೇಶಗಳನ್ನು ನೀಡುತ್ತದೆ. ಗೌತಮ ಬುದ್ಧನ ಅನುಯಾಯಿಗಳಾಗಿ ಸಂನ್ಯಾಸ ಸ್ವೀಕರಿಸಿದ ಸದಸ್ಯರು ಭಿಕ್ಷುಗಳೆಂದು ಕರೆಯಲ್ಪಡುತ್ತಿದ್ದರು. ಭಿಕ್ಷೆಬೇಡುವುದು ತನ್ನ ಹೊಟ್ಟೆ ತುಂಬಿಕೊಳ್ಳಲು ಅಲ್ಲ, ಹಸಿದವರನ್ನು ಮೊದಲು ತೃಪ್ತಿ ಪಡಿಸುವುದಾಗಿ ಹಾಗೂ ಧನಿಕರಿಗೆ ದಾನಿಗಳಾಗಲು ಅವಕಾಶ ಕಲ್ಪಿಸುವುದಕ್ಕಾಗಿ ಎಂಬ ಭಾವನೆಯಿಂದ ಬಿಕ್ಷುವಾಗಬೇಕೆಂದು ಗೌತಮ ಬುದ್ಧನು ಅವರಿಗೆ ಎಚ್ಚರಿಕೆ ನೀಡಿದ್ದನು. ಈ ಗ್ರಂಥದಲ್ಲಿ ನಿರೂಪಿಸಿದ ಅನೇಕ ಅಂಶಗಳು ಅಂದಿನ ಸಾಮಾಜಿಕ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಹೋಮ ಹವನ ಮಾಡುವುದಕ್ಕಿಂತ ಪರೋಪಕಾರ ಹಾಗೂ ಅಹಿಂಸಾಪ್ರವೃತ್ತಿಯಿಂದ ಸಿಗುವ ಫಲ ಅತಿಶ್ರೇಷ್ಠವೆಂದು ಹೇಳಿ ಎರಡು ಸಾವಿರ ವರ್ಷಗಳ ಹಿಂದೆ ದೀನದಲಿತರನ್ನೊಳಗೊಂಡ ಜಡಸಮಾಜವನ್ನು ಬಡಿದೆಬ್ಬಿಸಿದ ಮಹಾನುಭಾವ ಗೌತಮ ಬುದ್ಧ. ಇದನ್ನೇ ಅಂದಿನ ಸಾಮಾಜಿಕ ಕ್ರಾಂತಿಯೆನ್ನಬಹುದು. ಮನುಷ್ಯನು ತನ್ನನ್ನು ತಾನೇ ಉದ್ಧರಿಸಿಕೊಳ್ಳಲು ಅವನು ನೀಡಿದ ಸಂದೇಶ ಪ್ರತಿಯೊಂದಕ್ಕೂ ಸರಕಾರವನ್ನೇ ಅವಲಂಬಿಸುವ ಪ್ರವೃತ್ತಿ ಬೆಳೆಯುತ್ತಿರುವ ಪ್ರಸಕ್ತ ಸಮಾಜಕ್ಕೆ ಎಷ್ಟೊಂದು ಅವಶ್ಯವಾಗಿದೆಯೆಂದು ಊಹಿಸಬಹುದು.

ಸ್ವಾರ್ಥ, ದುರಾಶೆ, ದ್ವೇಷ ಮುಂತಾದವುಗಳಿಂದ ತುಂಬಿ ತುಳುಕುತ್ತಿರುವ ಈ ಸಂಕೀರ್ಣ ಸಮಾಜದಲ್ಲಿ ಧರ್ಮದ ಅಧ್ಯಯನ ಅನಿವಾರ್ಯವಾಗಿದೆ. ●

(ಕೃಪೆ : ಜನಪದ)

---

## ಕರುಳಿನ ಹೂ

—ಶ್ರೀಮತಿ ಸುಮ, ಬಾಗಲಕೋಟ, ಕನ್ನಡ ಪ್ರಾಧ್ಯಾಪಕಿ, ಶಹಾಬಾದ.

ಎದೆಯ ಹಂದರ ಮೇಲೆ ಹರಡಿದೆ
ಕರುಳ ಬಳ್ಳಿಯ ಹೂವು ಹರಳಿದೆ ||ಪ||

ನಿನ್ನೆ ಕಂಡೆ ನೀನೆನ್ನ ಕಣ್ಣಲಿ
ಮುಗಿದ ಮೊಗ್ಗೆಯ ತೆರದಲಿ
ಇಂದು ಬಿರಿದು ಕಂಪು ಸೂಸಿ
ತುಂಬಿ ಸಂತಸ ಮನದಲಿ || ೧ ||

ಹೂವಿನಂದದಿ ನಗುವ ಮಗುವೆ
ಮುಂದೆ ನಿನಗಿದೆ ಯೌವ್ವನ
ಹೂವ ಕಳಚಿದ ಹೀಚಿನಂದದಿ
ಬೆಳಗೆ ನಿನ್ನಯ ತನುಮನ || ೨ ||

ಹುಳಿಯು ಕೂಡಿದ ಹಣ್ಣಿನಂದದಿ
ಕಹಿಯು ಸಿಹಿಗಳ ಮಿಶ್ರಣ
ಅದರ ಮರ್ಮವನರಿತು ನೀ
ಕಾಣು ಜೀವನ ದರ್ಶನ || ೩ ||

# ಬಸವ ಬೋಧೆ

—ಪಂ. ಚನ್ನಪ್ಪ ಎರೇಸೀಮೆ

ಕ್ರಿ. ಶ. ೧೧೩೨ ನೆಯ ಇಸ್ವಿಯ ವೈಶಾಖ ಶುದ್ಧ ತದಿಗೆ ರೋಹಿಣಿ ನಕ್ಷತ್ರದಲ್ಲಿ ಬಾಗೆವಾಡಿಯ ಮಂಡಿಗೆಯ ಮಾದರಸ ಮತ್ತು ಮಾದಲಾಂಬಿಕೆಯರಿಗೆ ಮಗನಾಗಿ ಬಸವೇಶ್ವರನು ಜನಿಸಿದನು. ಬಸವಣ್ಣನ ಬಾಲ್ಯದ ವಿದ್ಯಾಭ್ಯಾಸವು ಬಾಗೆವಾಡಿಯಲ್ಲಿಯೇ ಆಯಿತು. ಮುಂದೆ ಪ್ರೌಢವಿದ್ಯಾಭ್ಯಾಸಕ್ಕಾಗಿ, ಮಲಪ್ರಹಭಾ ಕೃಷ್ಣಾ ನದಿಗಳ ಸಂಗಮ ಸ್ಥಾನವಾದ 'ಕಪ್ಪಡಿ ಸಂಗಮ' ಎಂಬಲ್ಲಿದ್ದ ಗುರುಕುಲಕ್ಕೆ ತೆರಳಿ ಅಲ್ಲಿ ಜಾತವೇದರೆಂಬ ಹೆಸರಿನ ಗುರುಗಳಲ್ಲಿ ವಿದ್ಯಾಭ್ಯಾಸ ಮಾಡಿದರು. ಈ ಜಾತವೇದರಿಗೆ ಈಶಾನಗುರುಗಳೆಂದು ಹೆಸರು. ಅರ್ಥಶಾಸ್ತ್ರ, ಗಣಿತ, ಸಮಾಜ ಶಾಸ್ತ್ರ, ವೇದಾಗಮ ಪುರಾಣಾದಿ ಸಕಲ ವಿದ್ಯೆಗಳಲ್ಲೂ ಬಸವಣ್ಣನವರು ಪಾರಂಗತರಾದರು. ಸುಮಾರು ೨೫ ನೆಯ ವಯಸ್ಸಿನವರೆಗೆ ಶ್ರದ್ಧೆಯಿಂದ ವಿದ್ಯಾಭ್ಯಾಸಮಾಡಿ ವಿದ್ವಾಂಸರೆನಿಸಿದ ಬಸವಣ್ಣನವರ ಕೀರ್ತಿ ಎಲ್ಲ ಕಡೆಗೂ ಹಬ್ಬಿತು. ಈ ಸಮಯದಲ್ಲಿ ಐಹೊಳೆ, ಪಟ್ಟದಕಲ್ಲುಗಳ 'ವೀರ ಬಣಂಜು' ಸಂಘವೆಂಬ ವ್ಯಾಪಾರೀ ಸಂಘವು ಭಾರತದಲ್ಲೆಲ್ಲ ಪ್ರಖ್ಯಾತಿ ಪಡೆದ ಸಂಘವೆನಿಸಿತ್ತು. ಇವರು ಭಾರತದ ಸಮಸ್ತ ಭಾಗದಲ್ಲೂ ಸಂಚರಿಸಿ ವ್ಯಾಪಾರ ಮಾಡುತ್ತಿದ್ದರು. ಬಸವಣ್ಣನವರು ಇವರ ಸಹಾಯದಿಂದ ಸಾಮಾನ್ಯವಾಗಿ ಕಾಶ್ಮೀರ ಮೊದಲ್ಗೊಂಡು ತಮಿಳು ನಾಡಿನವರೆಗೆ ಸಂಚರಿಸಿ ಭಾರತದ ಸ್ಥಿತಿಗತಿಗಳನ್ನೆಲ್ಲ ಅರ್ಥಮಾಡಿಕೊಂಡರು. ಆ ಕಾಲದ ಭಾರತದ ಸ್ಥಿತಿಗತಿಗಳನ್ನೂ ಜನತೆಯಲ್ಲಿ ಆವರಿಸಿರುವ ಅನೇಕ ಲೋಪದೋಷಗಳನ್ನೂ ಅರ್ಥಮಾಡಿಕೊಂಡು ಭಾರತೀಯ ಸನಾತನ ಧರ್ಮಕ್ಕೆ ಹಿಡಿದಿದ್ದ ಅಂಧಶ್ರದ್ಧೆಯೆಂಬ ಕೂಪದಿಂದ ಅದನ್ನು ಪಾರು ಮಾಡಲು ದೃಢ ಸಂಕಲ್ಪ ಮಾಡಿಕೊಂಡು ಕಪ್ಪಡಿಸಂಗಮಕ್ಕೆ ಹಿಂತಿರುಗಿದರು.

ಉತ್ತರ ಭಾರತವು ಪದೇ ಪದೇ ಪರಕೀಯರ ದಾಳಿಯಿಂದ ಜರ್ಜರಿತವಾಗಿ ಹೋಗಿತ್ತು. ಘಜನಿ ಮಹಮೂದನು ೧೭ ಸಲ ದಂಡೆತ್ತಿ ಬಂದು ಅಪಾರ ಐಶ್ವರ್ಯವನ್ನು ಕೊಳ್ಳೆ ಹೊಡೆದಿದ್ದನು. ಪರಕೀಯರು ಭಾರತದ ಭೂಮಿಯಲ್ಲಿ ಪದಾರ್ಪಣೆ ಮಾಡಿ ರಾಜ್ಯ ಕಟ್ಟುವ ಹವಣಿಕೆಯಲ್ಲಿದ್ದರು. ದಕ್ಷಿಣ ಭಾರತದಲ್ಲೂ ಕೂಡ ದೊಡ್ಡ ಚಕ್ರಾಧಿಪತ್ಯವಾಗಿದ್ದ ಚಾಲುಕ್ಯ ಚಕ್ರಾಧಿಪತ್ಯವು ಅವನತಿಗೆ ಬರಹತ್ತಿತು. ಇಲ್ಲಿ ಅನೇಕ ರಾಜ್ಯಗಳು ಹುಟ್ಟಿಕೊಂಡು ಅವೆಲ್ಲ ಐಕಮತ್ಯವಿಲ್ಲದೆ ಪರಸ್ಪರ ಯುದ್ಧದಲ್ಲಿಯೇ

ತೊಡಗಿದ್ದವು. ಇದರ ಜೊತೆಗೆ ಧರ್ಮ ಧರ್ಮಗಳ ತಿಕ್ಕಾಟವೂ ಉಂಟಾಗಿ ಜನತೆ ಗೊತ್ತುಗುರಿಯಿಲ್ಲದೆ ಸಾಗುತ್ತಿತ್ತು. ದೇಶವು ಬಡತನದತ್ತ ನಡೆಯುತ್ತಿತ್ತು, ಜನತೆ ಸ್ವಾಭಿಮಾನ ಶೂನ್ಯದತ್ತ ಅಡಿಯಿಡುತ್ತಿತ್ತು. ಈ ಎಲ್ಲ ಪರಿಸ್ಥಿತಿಗಳೂ ಬಸವಣ್ಣನ ಮೇಲೆ ಮಹತ್ತರ ಪರಿಣಾಮವನ್ನುಂಟುಮಾಡಿದವು. ಸರ್ವ ಪ್ರಯತ್ನದಿಂದ ಇಂಥ ತಾಳಗೆಟ್ಟು ತೊಳಲುತ್ತಿರುವ ಜನತೆಯಲ್ಲಿ ಜಾಗೃತಾ ಮನೋಭಾವವನ್ನುಂಟುಮಾಡ ಬೇಕು; ಕೆಚ್ಚುನೆಚ್ಚುಗಳಿಂದ ಅವರು ಶೋಭಿಸುವಂತಾಗಬೇಕು; ಹೀಗೆ ಸಮಗ್ರ ಭಾರತೀಯರನ್ನು ಸ್ವಾಭಿಮಾನದಿಂದ ಬೆಳಗುವಂತೆ ಮಾಡಿ, ಭಾರತದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ರಂಗದಲ್ಲಿ ನೂತನ ಕ್ರಾಂತಿಯೊಂದನ್ನು ಪ್ರಸಾರ ಮಾಡುವ ಯೋಚನೆಯಲ್ಲಿ ಮತ್ತು ಯೋಜನೆಯಲ್ಲಿ ಬಸವಣ್ಣ ಮುಳುಗಿ ಹೋದನು. ಇವನು ತನ್ನ ಸುಮಾರು ಇಪ್ಪತ್ತೈದನೆಯ ಪ್ರಾಯದಲ್ಲಿ ಕಲ್ಯಾಣದ ಅರಸರಲ್ಲಿ ಮಂತ್ರಿ ಯಾಗಿದ್ದ ತಮ್ಮ ಪೂರ್ವಸಂಬಂಧದ ಸಿದ್ಧರಸ ಎಂಬುವನ ಮಗಳಾದ ನೀಲಲೋಚನೆ ಯನ್ನೂ, ಸೋದರ ಮಾವನಾದ ಬಲದೇವ ಮಂತ್ರಿಯ ಮಗಳು ಗಂಗಾಂಬಿಕೆ ಯನ್ನೂ ಲಗ್ನವಾಗಿ ಗೃಹಸ್ಥಾಶ್ರಮ ಸ್ವೀಕರಿಸಿ ಕಲ್ಯಾಣದಲ್ಲಿಯೇ ವಾಸಿಸತೊಡಗಿ ದನು.

ಆಗ ಕಲ್ಯಾಣವು ಚಾಲುಕ್ಯ ಚಕ್ರವರ್ತಿಗಳ ಕೈತಪ್ಪಿ ಕಲಚೂರ್ಯ ವಂಶದ ಬಿಜ್ಜಳ ಎಂಬ ಚಾಲುಕ್ಯರ ಸಾಮಂತನೇ ಆಗಿದ್ದ ಅರಸನ ಸ್ವಾಧೀನಕ್ಕೆ ಬಂದಿತ್ತು. ಬಿಜ್ಜಳನು ಬಸವಣ್ಣನ ಅಸಾಧಾರಣ ಗಣಿತಶಾಸ್ತ್ರ ಪಾಂಡಿತ್ಯಕ್ಕೂ, ಪ್ರತಿಭೆಗೂ, ಸತ್ಯ ಶುದ್ಧ ನಡೆವಳಿಕೆಗೂ ಮಾರುಹೋಗಿದ್ದನು. ಅಂತೆಯೇ ಬಸವಣ್ಣನಿಗೆ ಬಿಜ್ಜಳ ಮೊರೆ ಮೊದಲು ಕರಣಿಕ ವೃತ್ತಿಯಲ್ಲಿ ಸ್ಥಾನಕೊಟ್ಟನು. ಬಸವಣ್ಣ ತನ್ನ ವೃತ್ತಿಯಲ್ಲಿ ತೋರಿದ ಕರ್ತವ್ಯನಿಷ್ಠೆ, ಪ್ರತಿಭೆ, ಕಾರ್ಯಕೌಶಲ, ಸತ್ಯಸಂಧತೆ, ಸ್ವಾಮಿಭೃತ್ಯ ಸಂಬಂಧವೇ ಮೊದಲಾದ ಉದಾತ್ತ ಗುಣಗಳಿಂದ ಮುಂದೆ ಮಂತ್ರಿ ಸ್ಥಾನವನ್ನು ಪಡೆದನು.

ಬಸವಣ್ಣನು ಸಾಮಾನ್ಯ ಜನತೆಯಲ್ಲಿ ಧರ್ಮತತ್ತ್ವಗಳನ್ನೂ, ಸಾಮಾಜಿಕ ನಡೆನುಡಿಗಳನ್ನೂ ಪ್ರಸಾರಮಾಡಲು, ಸಂಸ್ಕೃತಕ್ಕಿಂತ ಜನರ ಆಡುನುಡಿಯಾದ ಕನ್ನಡವೇ ಅತ್ಯುತ್ತಮ ಭಾಷೆಯೆಂದು ಭಾವಿಸಿ ವೇದ ಪುರಾಣಾಗಮಗಳಲ್ಲಿರುವ ತತ್ತ್ವಗಳನ್ನು ಕನ್ನಡದಲ್ಲಿಯೇ ವಚನ ರೂಪವಾಗಿ ರಚಿಸಿ ಜನತೆಯಲ್ಲಿ ಧಾರ್ಮಿಕ ಸಾಮಾಜಿಕ ತತ್ತ್ವಗಳನ್ನು ಪ್ರಸಾರಮಾಡಹತ್ತಿದನು. ಬಸವಣ್ಣನ ಈ ಹೊಸ ಅಭಿ ಪ್ರಾಯಗಳನ್ನೊಳಗೊಂಡ ವಿಚಾರಗಳು ಭಾರತದ ಮೂಲೆ ಮೂಲೆಗಳಲ್ಲಿ ಪ್ರಸಾರ ಗೊಂಡು ಕಾಶ್ಮೀರ ಮೊದಲ್ಗೊಂಡು ಕನ್ಯಾಕುಮಾರಿಯವರೆಗೆ ಅನೇಕ ಜನರ ಗಮನ ಸೆಳೆದು ಕಲ್ಯಾಣಕ್ಕೆ ಆಗಮಿಸಿದರು. ಹೀಗಾಗಿ ಕಲ್ಯಾಣ ನಗರವೇ ಒಂದು ಪುಟ್ಟ

ಘಾತವಾಗಿ ಪರಿಣಮಿಸಿತು. ಸುಮಾರು ೭೭೦ ಜನರುಳ್ಳ ಒಂದು ಅಖಿಲ ಭಾರತ ಮಟ್ಟದ 'ಶಿವಾನುಭವ ಮಂಟಪ'ವೆಂಬ ಒಂದು ಹೊಸ ಸಂಸ್ಥೆಯನ್ನು ಕಲ್ಯಾಣದಲ್ಲಿ ಕಟ್ಟಿದರು. ಬಳ್ಳಿಗಾವೆಯ ಪ್ರಭುದೇವರೇ ಆ ಸಂಸ್ಥೆಯ ಅಧ್ಯಕ್ಷರು. ಅವರು ಮಹಾ ವಿದ್ವಾಂಸರೂ ಮಹಿಮಾಶಾಲಿಗಳೂ ಆಗಿದ್ದರು. ಈ ಎಲ್ಲ ಪ್ರತಿನಿಧಿಗಳು ಮುಂದಿನ ಭಾರತದ ಉದ್ಧಾರಕ್ಕೆ ಯಾವ ಯೋಜನೆ ಹಾಕಬೇಕು? ಯಾವ ಮಾರ್ಗದಲ್ಲಿ ಜನತೆಯ ಜೀವನಮಟ್ಟವನ್ನು ಮೇಲೆತ್ತಬೇಕು? ಎಂಬ ಬಗೆಗೆ ತೂಗಿನೋಡಿ ವಿಚಾರಮಾಡಿ ಅನೇಕ ತತ್ತ್ವಗಳನ್ನು ಹೊರಗೆಡಹಿದರು. ಇವರೆಲ್ಲರ ವಿಚಾರಗಳು ವಚನಗಳ ರೂಪದಲ್ಲಿ ಇಂದಿಗೂ ಪ್ರಚಾರದಲ್ಲಿವೆ. ವಚನ ರಚನೆ ಮಾಡಿದವರಲ್ಲಿ ಬಸವಣ್ಣ, ಬಳ್ಳಿಗಾವೆಯ ಅಲ್ಲಮಪ್ರಭುದೇವರು, ಉಡುತಡಿಯ ಅಕ್ಕಮಹಾದೇವಿ, ಸೊಲ್ಲಾಪುರದ ಸಿದ್ಧರಾಮೇಶ್ವರ, ಕಾಶ್ಮೀರದ ಮೋಳಿಗೆ ಮಾರಯ್ಯ ಮತ್ತು ಅವನ ಹೆಂಡತಿ ಮಹಾದೇವಿಯಮ್ಮ, ಕಾಠೇವಾಡದ ಆದಯ್ಯ, ಬನಾರಸದ ಶಿವಲೋಕ ಮಂಚಣ್ಣ, ಮಹಾರಾಷ್ಟ್ರದ ಉರಿಲಿಂಗದೇವ, ಆಂಧ್ರದ ಕಲ್ಲುಕುರಿಕೆಯ ಸಕಲೇಶ ಮಾದರಸ, ಉರಿಲಿಂಗಪೆದ್ದಿ–ಮುಂತಾದವರು ಮುಖ್ಯರಾದರೂ ಇನ್ನೂ ಅನೇಕ ಜನ ಭಾರತದ ವಿವಿಧ ಭಾಗಗಳ ಜನರಿದ್ದಾರೆ. ಇವರೆಲ್ಲರೂ ಕನ್ನಡದಲ್ಲಿಯೇ ವಚನಗಳನ್ನು ರಚಿಸಿದ್ದಾರೆ.

ಮೇಲೆ ತಿಳಿಸಿದ ೭೭೦ ಜನರೆಲ್ಲರೂ ಬಸವಣ್ಣನ ಕ್ರಾಂತಿಕಾರಕ ಅಭಿಪ್ರಾಯಗಳಿಗೆ ಮಾರುಹೋಗಿ ಅವನ ಆದೇಶದಂತೆ ಕಾರ್ಯರಂಗಕ್ಕೆ ಧುಮುಕಿದ ಮಹಾ ವಿಚಾರವಾದಿಗಳು; ಸತ್ಯ ಶುದ್ಧ ನಡೆವಳಿಕೆಯುಳ್ಳವರು; ಅಖಂಡ ಭಾರತದ ಮೇಲ್ಮೆಗೆ ಹೆಣಗಿದವರು. ಭಾರತದ ಅನೇಕ ಮುಖ್ಯ ದೌರ್ಬಲ್ಯಗಳನ್ನು ಹೋಗಲಾಡಿಸಿ ಭಾರತದ ಜನತೆಯನ್ನು ಮೇಲಕ್ಕೆತ್ತಲು ಪ್ರಯತ್ನಿಸಿದ ಮಹಾ ಮಹಾಂತರು. ಇವರೆಲ್ಲರೂ ಬಸವಣ್ಣನವರ ಯೋಚನೆ, ಯೋಜನೆಗಳಂತೆ ಕಾರ್ಯಮಾಡಿದರು.

## ಬಸವಣ್ಣನವರ ಬೋಧೆ

### (ನಡೆ-ನುಡಿ)

ಬಸವಣ್ಣನವರು ಲೋಕಕ್ಕೆ ಬೋಧಿಸಿದ ಬೋಧೆಗಳು ಬಹು ಘನವಾದವು. ಪರಮಾತ್ಮನ ಲೀಲೆಯಿಂದ ಕಣ್ಣಿಗೆ ಕಾಣುವ ಈ ಜಗತ್ತಿನಲ್ಲಿ ಬಾಳಲು ಎಲ್ಲರಿಗೂ ಹಕ್ಕಿದೆ. ಈ ಜಗತ್ತು, ನೀರು, ಗಾಳಿ, ಅನ್ನ ಎಲ್ಲವೂ ಪರಮಾತ್ಮನ ದಾನ. ಆತನ ಈ ದಾನವೆಲ್ಲವನ್ನುಂಡು ನಾವು ಜೀವಿಸಿದ ಬಳಿಕ ಆತನ ಬಗೆಗೆ ನಮಗೆ ಅತ್ಯಂತ ಭಕ್ತಿಬೇಕು. ಈ ಸೃಷ್ಟಿಯೆಂಬುದು ಆ ಪರಮಾತ್ಮನ ಟಂಕಶಾಲೆಯೇ ಆಗಿದೆ. ನಾವೆಲ್ಲ ನಾಣ್ಯಗಳು, ನಾಣ್ಯಗಳ ಎರಡೂ ಮುಖ ಶುದ್ಧವಾಗಿ ಅಚ್ಚೊತ್ತಿದ್ದರೆ ಮಾತ್ರ

ವ್ಯವಹಾರಕ್ಕೆ ಯೋಗ್ಯವಾಗುವ ಹಾಗೆ ನಾವು ಮನಸ್ಸಿನಿಂದ ಪರಿಶುದ್ಧರಾಗಿ ವ್ಯವಹಾರದಲ್ಲೂ ಪರಿಶುದ್ಧರಾಗಿ ಬಾಳಬೇಕು. ಕಳ್ಳನಾಣ್ಯ ಕೊಟ್ಟನಾಣ್ಯ ವ್ಯವಹಾರಕ್ಕೆ ಸಲ್ಲುವುದಿಲ್ಲ. ಈ ದೇಹವೆಂಬುದು ನಶ್ವರ; ಮೂರು ದಿನದ ಸಂತೆ ಎನ್ನುತ್ತ ದೇಹದ ಬಗೆಗೆ ಅನಾದರಣೆ ಯೋಗ್ಯವಲ್ಲ. ಇದು ಪರಮಾತ್ಮನನ್ನು ಒಲಿಸುವುಪಕ್ಕೆ ನಮಗೆ ಪರಮಾತ್ಮನಿಂದಲೇ ಕೊಡಲ್ಪಟ್ಟ ಪ್ರಸಾದ. ಈ ದೇಹವನ್ನು ಧರಿಸಿಯೇ ನಾವು ಸಾಧಿಸಬೇಕಾದುದನ್ನು ಸಾಧಿಸಿ ಪರಮಾತ್ಮನ ಕೃಪೆಗೆ ಪಾತ್ರರಾಗುವ ಹಾಗೆ ಈ ಪ್ರಪಂಚದಲ್ಲಿ ನಡೆದರೆ ಅವನ ಪ್ರೀತಿಗೆ ಪಾತ್ರರಾಗುತ್ತೇವೆ, ಹುಟ್ಟಿದುದಕ್ಕೂ ಸಾರ್ಥಕವಾಗುತ್ತದೆ. ಈ ದೇಹವು ಪರಮೇಶ್ವರನು ಆವಾಸ ಮಾಡುವುದಕ್ಕೆ ಯೋಗ್ಯವಾಗಿರುವಂತೆ ಮನಸ್ಸಿನಲ್ಲಿರುವ ಕೊಳೆ, ಬುದ್ಧಿಯಲ್ಲಿರುವ ಕೊಳೆಗಳನ್ನೆಲ್ಲ ತೆಗೆಯಬೇಕು. ಗುಡಿಸಿ ಆ ಎಲ್ಲ ಕೊಳೆ ತೆಗೆದು ರಂಗವಲ್ಲಿಯನ್ನಿಕ್ಕಿ ಗುಡಿತೋರಣ ಕಟ್ಟಿದರೆ ಈಶ್ವರ ನಮ್ಮಲ್ಲಿ ಬಂದು ಅಡಿಯಿಟ್ಟಾನು. ದೇವರಿಗಾಗಿ ಬೇರೆ ಗುಡಿ ಕಟ್ಟಲೇ ಬೇಕಾಗಿಲ್ಲ. ನಮ್ಮ ದೇಹದ ಕಾಲುಗಳೇ ಕಂಬವಾಗಬೇಕು, ಶಿರವೇ ಬಂಗಾರದ ಕಳಶವಾಗಬೇಕು. ಪ್ರಪಂಚವನ್ನೆಲ್ಲ ವ್ಯಾಪಸಿರುವ ಪರಮಾತ್ಮನಿಗೆ ಗುಡಿ ಕಟ್ಟಿ ಅಲ್ಲಿ ಒಂದು ವಿಗ್ರಹವಿಟ್ಟು ಪೂಜಿಸಿ ಅವನ ಕೃಪೆ ಪಡೆಯುವುದಕ್ಕಿಂತ ನಮ್ಮ ದೇಹದಲ್ಲಿಯೇ ಅವನಿಗೆ ಇಂಬು ಕೊಡಬೇಕು. ನಾವು ಪರಿಶುದ್ಧರಾಗದ ವಿನಾ ಅವನು ನಮ್ಮಲ್ಲಿ ಪ್ರವೇಶಿಸಲಾರನು. ಕೊಳೆಗೂ ಪರಮಾತ್ಮನಿಗೂ ಬಲು ದೂರ.

ಈ ಜಗತ್ತಿಗೆ ಪರಮಾತ್ಮನೊಬ್ಬನೇ. ಅವನಿಗೆ ಹಲವು ಹೆಸರುಗಳಿರಬಹುದು. ನೂರಾರು ದೇವರುಗಳ ಪೂಜೆ, ನೈವೇದ್ಯ, ಪತ್ರೆಪುಷ್ಪ, ಮಜ್ಜನ–ಇವುಗಳಿಂದಲೇ ಅವನು ತೃಪ್ತನಾಗಲಾರನು. ಅವನು ತೃಪ್ತಿಯನ್ನು ಹೊಂದಲು ನಮ್ಮ ಹೃದಯವನ್ನೇ ಅವನಿಗೆ ಅರ್ಪಿಸಬೇಕು. ಪ್ರಾಣಿಗಳನ್ನು ಬಲಿಕೊಟ್ಟು ದೇವರ ಒಲುಮೆ ಪಡೆಯಲು ಪ್ರಯತ್ನಿಸುತ್ತಾರೆ. ಇದಂತೂ ಅತೀವ ಮೌಢ್ಯದ ಪರಮಾವಧಿ. ಸ್ವರ್ಗಲೋಕವೆಂಬುದು ಬೇರೆ ಎಲ್ಲೂ ಇಲ್ಲ, ನಾವು ವಾಸ ಮಾಡುವ ಈ ಲೋಕವೇ ಸ್ವರ್ಗವಾಗುವಂತೆ ನಾವು ಮಾರ್ಪಡಿಸಿಕೊಳ್ಳಬೇಕು. ಸತ್ಯದ ನಡೆ-ನುಡಿಗಳಿಂದ ನಮ್ಮ ಸುತ್ತಮುತ್ತಣ ಪ್ರಪಂಚವೇ ಸ್ವರ್ಗವಾಗುತ್ತದೆ. "ಸತ್ಯವ ನುಡಿವುದೇ ಸ್ವರ್ಗ; ಮಿಥ್ಯವ ನುಡಿವುದೇ ನರಕ" "ಆಚಾರವೇ ಸ್ವರ್ಗ; ಅನಾಚಾರವೇ ನರಕ" "ಅಯ್ಯಾ ಎಂದರೆ ಸ್ವರ್ಗ; ಎಲವೋ ಎಂದರೆ ನರಕ" ಹೀಗೆ ಸತ್ಯ, ಆಚಾರ, ಮೃದುನುಡಿ–ಇವೇ ಸ್ವರ್ಗಪ್ರಾಯವಾದುವು, ಎಂದು ಬಸವಣ್ಣನವರು ಲೋಕಕ್ಕೆ ಸಾರಿ ಸತ್ತಮೇಲೆ ಸಿಗಬಹುದಾದ ಯಾವುದೋ ಕನಸಿನ ಸ್ವರ್ಗವನ್ನು ಅಲ್ಲಗಳೆದು ಜೀವಂತವಿರುವಾಗಲೇ ನಮ್ಮ ನಡೆ-ನುಡಿಗಳಿಂದ ನಾವು ವಾಸಿಸುವ ಈ ಪ್ರಪಂಚವನ್ನು ಸ್ವರ್ಗವನ್ನಾಗಿಸಿಕೊಳ್ಳಬೇಕೆಂದು ಹೇಳುವ ಮಾತುಗಳು ಆತ್ಯಧಿಕ ಬೆಲೆಯುಳ್ಳವು.

ನೆಮ್ಮದಿಯಿಂದ ಬಾಳಬೇಕಾದರೆ, ನಮ್ಮ ನಮ್ಮ ಮನಸ್ಸನ್ನು ಸಂತೈಸಿಕೊಳ್ಳ ಬೇಕು; ತನುವನ್ನು ಸಂತೈಸಿಕೊಳ್ಳಬೇಕು. ಇನ್ನೊಬ್ಬರಿಗೆ ಬೋಧೆ ಮಾಡುವ ಮೊದಲು ನಾವು ಶುದ್ಧವಾಗಿದ್ದರೆ, ನಮ್ಮನ್ನು ನೋಡಿಯೇ ಲೋಕ ಕಲಿಯುತ್ತದೆ. ಸಮವಿನಯ, ಮೃದು ನುಡಿಗಳಿಂದ ಮೂರು ಲೋಕ ಗೆಲ್ಲಬಹುದು. ನಾಲಿಗೆ ಇದೆ ಯೆಂದು ಮನಸ್ಸಿಗೆ ಹರಟಬಾರದು. ಮಾತಿನಲ್ಲಿ ಎಚ್ಚರದಪ್ಪಬಾರದು, ಮನೆಗೆ ಯಾರಾದರೂ ಬಂದರೆ ಅವರಿಗೆ ಏನನ್ನು ಕೊಡಲು ಶಕ್ತಿಯಿಲ್ಲದಿರಬಹುದು. ಒಳ್ಳೆಯ ಮಾತುಗಳಿಂದ ಉಪಚರಿಸಲೂ ನಮ್ಮ ನಾಲಗೆಯನ್ನು ಉಪಯೋಗಿಸಿಕೊಳ್ಳದಿದ್ದರೆ ಹೇಗೆ? ಪುಣ್ಯ ಪಾಪಗಳು ನಮ್ಮ ಇಷ್ಟಗಳೇ ಆಗಿವೆ. ಸದ್ವ್ಯವಹಾರದಿಂದ ಪುಣ್ಯಗಳಿಸಿಕೊಂಡು ಲೋಕದಲ್ಲಿ ಎಲ್ಲರ ಸ್ತುತಿಗೂ ಪಾತ್ರರಾಗಬಹುದು. ದುರ್ವ್ಯವ ಹಾರದಿಂದ ಪಾಪತಂದುಕೊಂಡು ನಿಂದೆಗೆ ಒಳಗಾಗಬಹುದು. ಹೀಗೆ ವ್ಯಕ್ತಿಗತವಾದ ಶುದ್ಧಿಯನ್ನು ಪಡೆದು ತನ್ನ ಮನೆಯ ಶುದ್ಧಿ-ಊರಿನ-ನಾಡಿನ ಶುದ್ಧಿಯನ್ನು ಪ್ರತಿ ಯೊಬ್ಬರೂ ಮಾಡಿಕೊಳ್ಳಬೇಕು. ಪ್ರತಿಯೊಬ್ಬನೊಡನೆ ಆತ್ಮೀಯ ವಿಶ್ವಾಸ ಬೆಳೆಸ ಬೇಕು ಎಂಬುದಕ್ಕೆ ಅವರು ಈ ಕೆಳಗಿನ ಬಹು ಬೆಲೆಯುಳ್ಳ ವಚನ ಹೇಳಿದ್ದಾರೆ.

> **ಇವ ನಾರವ? ಇವ ನಾರವ? ಇವ ನಾರವ? ಎಂದೆನಿಸದಿರಯ್ಯ**
> **ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯ**
> **ಕೂಡಲ ಸಂಗಮದೇವ ನಿಮ್ಮ ಮನೆಯ ಮಗನೆಂದೆನಿಸಯ್ಯ.**

ಎಲ್ಲರೂ ಪರಮಾತ್ಮನ ಮಕ್ಕಳೇ ಆಗಿರುವಾಗ ಇವನು ಯಾರವನು? ಎಂಬ ಪ್ರಶ್ನೆಯೇ ಏಳುವುದಿಲ್ಲ. ಆದ್ದರಿಂದ ಎಲ್ಲರೂ ನಮ್ಮವರೆಂಬ ಭಾವನೆ ಬೆಳೆಯಿಸಿ ಪ್ರೀತಿ ವಿಶ್ವಾಸಗಳಿಂದ ನಡೆದುಕೊಳ್ಳಬೇಕೆಂದು ಬೋಧಿಸಿದ್ದಾರೆ. ಒಟ್ಟಿನಲ್ಲಿ ಬಸವಣ್ಣನವರು ಲೋಕಕ್ಕೆ ಸಾರಿದ ಸಂದೇಶಗಳನ್ನು ಈ ಕೆಳಗಿನಂತೆ ಕ್ರೋಢೀಕರಿಸಿ ಹೇಳಬಹುದಾಗಿದೆ.

೧) ಪ್ರತಿ ವ್ಯಕ್ತಿಯೂ ರಾಷ್ಟ್ರಹಿತಕ್ಕೆ ತನ್ನ ತನ್ನ ಕರ್ತವ್ಯಗಳನ್ನು ಕೀಳು ಮೇಲೆನ್ನದೆ ಮಾಡಿ ನ್ಯಾಯವಾಗಿ ಸಂಪಾದಿಸಿ ತಾನೂ ಸುಖಪಡಬೇಕು; ಕಿಂಚಿತ್ ಭಾಗವನ್ನು ಕೊಡಿಟ್ಟು ಲೋಕಜೀವನಕ್ಕೆ ವಿನಿಯೋಗಿಸಬೇಕು. ಸೋಮಾರಿಗಳು ರಾಷ್ಟ್ರಸಂಪದಭಿವೃದ್ಧಿಗೆ ವೈರಿಗಳು, ಕರ್ತವ್ಯದಲ್ಲಿ ಪ್ರೀತಿಯಿಲ್ಲದ ಜನಜಂಗುಳಿಯಿಂದ ರಾಷ್ಟ್ರದ ಶಕ್ತಿ ನಷ್ಟವಾಗಿ ಆರ್ಥಿಕವಾಗಿ ರಾಷ್ಟ್ರ ಬಡವಾಗುವುದು.

೨) ಬೀದಿಯಲ್ಲಿ ಕಸ ಗುಡಿಸುವ ಕೆಲಸವೇ ಆಗಲಿ, ಸಿಂಹಾಸನದ ಮೇಲೆ ಕುಳಿತು ರಾಜ್ಯಭಾರ ಮಾಡುವುದೇ ಆಗಲಿ, ಈ ತನ್ನ ಪಾಲಿನ ಕೆಲಸವನ್ನು ದೇವರ ಪೂಜೆಯಂತೆ ಶ್ರದ್ಧಾ-ಭಕ್ತಿ-ವಿಶ್ವಾಸಗಳಿಂದ ಮಾಡಬೇಕು. ದೇವರ ಪೂಜೆ ಮರೆತರೂ ಸೈರಿಸಬಹುದು ಕರ್ತವ್ಯವನ್ನು ಮರೆತರೆ ಸೈರಿಸಲಾಗದು.

೩) ದೇಶದಲ್ಲಿ ಭಿಕ್ಷುಕರಿರಬಾರದು, ಅದು ದೇಶಕ್ಕೆ ಒಂದು ಅಭಿಶಾಪ; ರಾಷ್ಟ್ರದ ದೌರ್ಬಲ್ಯ. ಆದ್ದರಿಂದ ತಾನು ಮಾಡುವ ಕಾಯಕದಿಂದ ಬಂದ ಕಾರೆಯ ಸೊಪ್ಪಾದರೂ ಚಿಂತೆಯಿಲ್ಲ, ತೃಪ್ತಿಯಿಂದ ಆ ಫಲವನ್ನು ಪ್ರಸಾದ ರೂಪವಾಗಿ ಉಣ್ಣಬೇಕು. ಯಾರನ್ನೂ ಏನನ್ನೂ ಬೇಡಬಾರದು, ಶಿವನೇ ಬಂದು ಏನನ್ನಾದರೂ ಕೊಡಲು ಬಂದರೆ ಸ್ವೀಕರಿಸಬಾರದು. ಏಕೆಂದರೆ ಅದು ಕಾಯಿಕ ಮಾಡಿಬಂದ ಪ್ರತಿ ಫಲವಲ್ಲ.

೪) ಸಮಾಜದಲ್ಲಿ ಪ್ರತಿಯೊಂದು ಕಸಬಿನವರೂ ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿ ಉಳಿದ ಕಸಬಿನವರೊಡನೆ ಸಹಕಾರದಿಂದ ಜೀವಿಸಬೇಕು. ಕಾಯಕದ ಮೇಲಿಂದ ಮನುಷ್ಯನ ಯೋಗ್ಯತೆಯನ್ನು ನಿಷ್ಕರ್ಷೆಮಾಡಿ ಮೇಲುಕೀಳುಗಳನ್ನೆಣಿಸಬಾರದು. ಈಶ್ವರನ ಪ್ರೀತಿಗೆ ಪಾತ್ರನಾದ ಭಕ್ತನು ಎಲ್ಲಿ ಹುಟ್ಟಿದರೂ ಶ್ರೇಷ್ಠನು.

೫) ಲೋಕದ ಜನರಲ್ಲಿ ಶಿವನ ಭಕ್ತಿಯಲ್ಲಿ ಜೀವಿಸುವ ಸಾತ್ವಿಕ ಜೀವಿಯೊಂದು ಜಾತಿ. ಅದಿಲ್ಲದವರೊಂದು ಜಾತಿಯಲ್ಲದೆ ಬೇರೆ ಜಾತಿಮತಗಳ ಗೊಂದಲವೇ ಇಲ್ಲ. ಐಶ್ವರ್ಯ, ವಿದ್ಯೆ, ಸಂಸ್ಕಾರವಿದ್ದವರೇ ಮೇಲು ಉಳಿದವರು ಕೀಳು ಎಂಬ ಭಾವನೆ ಯೋಗ್ಯವಲ್ಲ. ಪರಹಿಂಸೆಯನ್ನು ಮಾಡುವವನೇ ಮಾದಿಗ; ಹೊಲಸು ತಿನ್ನುವವನೇ ಹೊಲೆಯ. ಒಟ್ಟಿನಲ್ಲಿ ಸಕಲ ಜೀವರುಗಳಿಗೆಲ್ಲ ಒಳ್ಳೆಯದಾಗಲಿ ಎಂಬ ಭಾವನೆಯಿಂದ ಈ ಲೋಕದಲ್ಲಿ ನಡೆಯುವವನೇ ಉತ್ತಮ ಕುಲದವನು.

೬) ಹಣವನ್ನು ನೆಲದಲ್ಲಿ ಹೂಳಿಡುವುದಾಗಲಿ ಜನಜೀವನಕ್ಕೆ ಬೇಕಾಗುವ ವಸ್ತುಗಳನ್ನು ಲೋಭದಿಂದ ಒಬ್ಬನೆ ಕೂಡಿಟ್ಟುಕೊಳ್ಳುವುದಾಗಲಿ ಸಲ್ಲದು. ಅದರಿಂದ ರಾಷ್ಟ್ರಕ್ಕೆ ದೊಡ್ಡ ಹಾನಿ, ಜನಜೀವನ ಅಸ್ತವ್ಯಸ್ತಗೊಳ್ಳುವುದು. ಏಕೆಂದರೆ ಎಲ್ಲ ವಸ್ತುಗಳೂ ಶಿವನಿಂದಲೇ ಲಭ್ಯವಾಗಿ ಅವನ ಸಮಸ್ತ ಜೀವರಾಶಿಗಳಿಗೆ ಉಪಯೋಗವಾಗಬೇಕಾದುವು. ಯಾವ ವಸ್ತುಗಳ ಮೇಲೂ ನಮಗೆ ಅಧಿಕಾರವಿಲ್ಲ. ಎಲ್ಲವೂ ಪರಮಾತ್ಮನ ಕೃಪೆ, ಆದ್ದರಿಂದ ಇದ್ದವರು ಇಲ್ಲದವರಿಗೆ ಹಂಚಬೇಕು. ಇಲ್ಲದವರು ದುಡಿದು ಸಂಪಾದಿಸಿ ಜೀವನ ಮಾಡಬೇಕು.

೭) ದೇವರ ಪೂಜೆಯನ್ನು ಆತನ ಕೃಪೆ ಪಡೆಯಲು ವೇದಗಳನ್ನೇ ಓದಿ ಪಾಂಡಿತ್ಯ ಸಂಪಾದಿಸಬೇಕಿಲ್ಲ. ಏಕೆಂದರೆ ದೇವರು ವೇದಪ್ರಿಯನಷ್ಟೇ ಅಲ್ಲ, ದೇವನ ಒಲುಮೆಗೆ ಜಾತಿ, ಮತ, ಕುಲ, ಬಲ, ಛಲ, ಓದು ಇವಾವುವೂ ಅಡ್ಡಬರುವುದಿಲ್ಲ. ಪರಮೇಶ್ವರನು ಭಕ್ತಿಪ್ರಿಯ, ಭಕ್ತಿ ಜೀವನವೆಂದರೆ ನಡೆವಳಿಕೆ, ನುಡಿಯುವಿಕೆ, ಸುಖಪಡುವಿಕೆ, ಕರ್ತವ್ಯ ಮಾಡುವಿಕೆ, ನೋಡುವಿಕೆ, ದೇವಪೂಜೆ ಮಾಡುವಿಕೆ ಕೊನೆಗೆ ದೇಹ ಬಿಡುವಿಕೆ–ಈ ಎಲ್ಲ ಕೆಲಸಗಳಲ್ಲಿ ಶುದ್ಧವಾಗಿ ವ್ಯವಹಾರ ಮಾಡುವುದೇ

ಭಕ್ತಿಜೀವನ. ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಅಹಂಕಾರವಾಗಲಿ, ಕೀಳುಕುಲ ದಲ್ಲಿ ಹುಟ್ಟಿದೆನೆಂಬ ಸಂಕೋಚವಾಗಲಿ ಸಲ್ಲದು.

೮) ದಯಾದಾಕ್ಷಿಣ್ಯಪರನಾಗಿ ಅನ್ಯಾಯಕ್ಕೆ ಎಂದೂ ಮನಸ್ಸನ್ನು ಮಾರಿ ಕೊಳ್ಳಬಾರದು. ನಿಷ್ಠುರವಾಗಿ ನ್ಯಾಯವನ್ನು ಎತ್ತಿಹಿಡಿಯಬೇಕು. ಈ ಸಂದರ್ಭ ದಲ್ಲಿ ಎಷ್ಟೇ ಕೋಪತಾಪಗಳು ಜನರಿಂದ ಉಂಟಾಗಬಹುದು ಅದಾವುದಕ್ಕೂ ಹೆದರದೆ ಮುನ್ನಡೆಯಬೇಕು. ಈ ಸಂದರ್ಭದಲ್ಲಿ ಮರಣವೇ ಪ್ರಾಪ್ತಿಯಾಗುವುದಾದರೂ ಅದನ್ನು ಸಂತೋಷದಿಂದ ಅಪ್ಪಬೇಕು. ಕಾಯದ ಕಳವಳಕ್ಕೆ ಅಂಜಿ ಕಾಯಯ್ಯ ಎಂದಾಗಲಿ, ಜೀವನೋಪಾಯಕ್ಕಾಗಿ ಈಯಯ್ಯ ಎಂದೆನ್ನಬಾರದು. ಉರಿಬಂದರೂ ಸಿರಿಬಂದರೂ ಬೇಡ-ಬೇಕು, ಎನ್ನದಹಾಗೆ ಜೀವನವನ್ನು ಧೈರ್ಯವಾಗಿ ರೂಪಿಸಿಕೊಳ್ಳ ಬೇಕು. ಅಂಜಿ ಅಳುಕಿ ನಡೆಯಬಾರದು. ಸತ್ಯವನ್ನು ಎತ್ತಿ ಹಿಡಿಯುವವನು ಆನೆಯಮೇಲೆ ಏರಿಹೋದಹಾಗೆ; ಅಸತ್ಯದ ನಾಯಿಗಳು ಬೊಗಳಿದರೆ ಏನಾಗ ಬೇಕು? ಅದಕ್ಕೆ ಅಂಜಿದರೆ ಲೋಕಕ್ಕೆ ನ್ಯಾಯ ಸಿಗುವುದು ಹೇಗೆ?

ಬಸವಣ್ಣನವರು ಲೋಕಕ್ಕೆ ಕೊಟ್ಟ ಸಂದೇಶಗಳೆಲ್ಲವನ್ನು ವಿಚಾರಿಸಿದರೆ, ಅವ ರೊಬ್ಬ ಉನ್ನತಮಟ್ಟದ ಆದರ್ಶವಾದಿಗಳಾಗಿ ಗೋಚರಿಸುತ್ತಾರೆ. ಅವರ ಜೀವನ ವೆಲ್ಲ ವ್ಯಕ್ತಿ-ಸಮಾಜ, ರಾಷ್ಟ್ರ-ರಾಷ್ಟ್ರಪ್ರೇಮದ ಗಾಢವಾದ ನಡೆಯಲ್ಲಿ ಮುಳುಗಿದುದ ಗೋಚರವಾಗುವುದು. ಲೋಕದ ಹಿತವೇ ತನ್ನ ಹಿತ; ತನ್ನ ಹಿತವೇ ಲೋಕದ ಹಿತ ಎಂಬ ಭಾವನೆಯಿಂದ ನಡೆಯುವವನೇ ದೇವರ ಪ್ರೀತಿಗೆ ಪಾತ್ರನಾಗುವವನು ಎಂಬ ದಿವ್ಯ ಸಂದೇಶವು ಅವರ ವಚನಗಳನ್ನೋದುವವರಿಗೆ ತಿಳಿದುಬರುವುದು ಬಸವಣ್ಣನ ವಿಚಾರವಾಗಿ ಕನ್ನಡ, ತಮಿಳು, ತೆಲಗು, ಸಂಸ್ಕೃತ, ಮರಾಠಿ ಭಾಷೆ ಗಳಲ್ಲಿ ಅನೇಕ ಗ್ರಂಥಗಳು ಆ ಕಾಲದಲ್ಲಿಯೇ ಹುಟ್ಟಿವೆ.

ಬಸವಣ್ಣನವರು ತಮ್ಮ ಕ್ರಾಂತಿ ಕ್ಷೇತ್ರದಲ್ಲಿ ಕಾರ್ಯ ಮಾಡಿದ ಕಾಲ ಕೇವ ೧೦-೧೨ ವರ್ಷಗಳು ಮಾತ್ರ. ಕ್ರಿ.ಶ. ೧೧೩೨ ರಲ್ಲಿ ಜನ್ಮಧಾರಣೆ ಮಾಡಿ ಸುಮಾರ ೧೧೫೬ ರ ಹೊತ್ತಿಗೆ ಕಲ್ಯಾಣದಲ್ಲಿ ಬಿಜ್ಜಳನ ಆಸ್ಥಾನಕ್ಕೆ ಸೇರಿ, ಕ್ರಿ.ಶ. ೧೧೬೮ ಹೊತ್ತಿಗೆ ಮರಣ ಹೊಂದಿದರು. ಇಷ್ಟು ಅಲ್ಪ ಕಲಾವಧಿಯಲ್ಲಿ ಅವರು ಮಾಡಿ ಅದ್ಭುತಕ್ರಾಂತಿ ಸೂರ್ಯಚಂದ್ರರಿರುವವರೆಗೂ ಇರುವಷ್ಟು ಸತ್ವಭರಿತವಾಗಿದೆ. ಬಸವ ನವರು ಕನ್ನಡ ಜನತೆಯನ್ನು ಅಂಧಕೂಪದಿಂದ ಮೇಲೆತ್ತಿದ ಮಹಾನುಭಾವ. ಅವ ವಿಚಾರಧಾರೆಗಳು ಎಲ್ಲ ಕಾಲಕ್ಕೂ ಅಮೂಲ್ಯತರುಪಂಥವುಗಳು. ಪ್ರಪಂಚದ ಮಹಾ ಕ್ರಾಂತಿಕಾರರಾದ ಸ್ಟಾಲಿನ್, ಕಾರ್ಲ್‌ಮಾರ್ಕ್ಸ್, ಲೇನಿನ್ ಮೊದಲಾದ ಮಹಾ ಪುರುಷರಿಗೆ ಬಸವಣ್ಣನ ವಿಚಾರಧಾರೆಗಳು ಗೊತ್ತಾಗಿದ್ದರೆ ಅವನ್ನು ಅವರು ತಲೆ ಮೇಲೆ ಹೊತ್ತು ಮೆರೆಯುತ್ತಿದ್ದರು. ಇಂದಿನ ಬೆಳೆದುಬಂದ ಸಮಾಜವಾದದ ಕಾ ದಲ್ಲೂ ಬಸವಣ್ಣನವರ ಅಭಿಪ್ರಾಯಗಳನ್ನೆಲ್ಲ ಕಾರ್ಯರೂಪಕ್ಕೆ ತರಲು ಶಕ್ಯವಾಗಿಲ್ಲ.

ಸಿದ್ಧಗಂ

(ಮುಂದುವರಿದ ಲೇಖನ)

# ಎಲರ್ಜಿ (ರಕ್ತನಂಜು)

—ಡಾ|| ಎಲ್. ಆರ್. ಹೆಗಡೆ

ಹಳ್ಳಿಯ ಮದ್ದುಗಳಲ್ಲಿ ಪ್ರಾಣಿಯ ರಕ್ತ, ಕೊಬ್ಬು ಮುಂತಾದುವನ್ನು ಚಿಕಿತ್ಸೆಯಲ್ಲಿ ಬಳಸುವುದುಂಟು. ಆ ಪ್ರಕಾರ, ದಮ್ಮಿನ ರೋಗದಲ್ಲಿ ಹುಲಿಯ ರಕ್ತವನ್ನಾಗಲಿ, ಕೊಬ್ಬನ್ನಾಗಲಿ ಸೇವಿಸಿದರೆ, ದಮ್ಮು, ಹೃದಯದ ದಮ್ಮು ಸಹಾ ಗುಣವಾಗುವುದೆಂದು ಹೇಳುತ್ತಾರೆ. ಹುಲಿಯನ್ನು ಕೊಲ್ಲುವುದು ಕಾಯಿದೆಯಿಂದ ಅಸಾಧ್ಯವಾಗುವುದೆಂದು ತಿಳಿಯುತ್ತದೆ. ಮನುಷ್ಯರನ್ನು ತಿನ್ನುವ ಹುಲಿಯ ವಿಷಯ ಬೇರೆ.

ಆದರಿಂದ ದಮ್ಮಿನ ರೋಗಿಗಳು ಕತ್ತೆಯ ಹಾಲನ್ನು ನಿತ್ಯವೂ ಉಪಯೋಗಿಸಿದರೆ ಪ್ರಯೋಜನವಾಗುತ್ತದೆ. ಕ್ಷಯ ರೋಗದಲ್ಲಿಯೂ ಕತ್ತೆಯ ಹಾಲು ಗುಣಕಾರಿ ಎನ್ನಲಾಗಿದೆ.

ತಾಜಾ ಗೋಮೂತ್ರವನ್ನು ಮೂರು ಮಡಿಕೆಯ ಬಟ್ಟೆಯಲ್ಲಿ ಮೂರು ಸಲ ಶೋಧಿಸಿ ತೆಗೆದು, ದಿನಾ ಬೆಳಿಗ್ಗೆ ಹಸಿದ ಹೊಟ್ಟೆಯಲ್ಲಿ ಎರಡು ಔನ್ಸ್ ಗೋಮೂತ್ರವನ್ನು ಸೇವಿಸಿದರೆ, ದಮ್ಮಿನ ತ್ರಾಸು ಶಮನವಾಗುವುದಂತೆ.

ಹೃದಯದ ದಮ್ಮಿನವರು ಪಥ್ಯಾಹಾರವನ್ನು (ಲಘು, ಹಗುರ ಆಹಾರ) ಸೇವಿಸುತ್ತಿದ್ದು, ಅಶ್ವಗಂಧಿ ಮತ್ತು ಬಿಳಿಮತ್ತಿ ಮಡಿ (ವಸ್ತ್ರಗಲಿತ) ಯನ್ನು ಹತ್ತು ಹತ್ತು ಗ್ರೇನ್ (ಗ್ರೇನ್ ಅಂದರೆ ಅಕ್ಕಿಕಾಳಿನಷ್ಟು) ನಿಯಮಿತವಾಗಿ ಸೇವಿಸಿದರೆ ಅವರಿಗೆ ಪ್ರಯೋಜನವಾಗಬಹುದು. ಅಥವಾ ಅರ್ಜುನಾರಿಷ್ಟ ಮತ್ತು ಅಮೃತಾರಿಷ್ಟ ಇವೆರಡನ್ನು ಎರಡೆರಡು ಚಮಚಗಳಂತೆ ಸೇರಿಸಿ ತೆಗೆದುಕೊಳ್ಳುವುದು ಹಿತಕರವೆಂದು ತಿಳಿಸಲಾಗಿದೆ.

ಅಲರ್ಜಿ ಚರ್ಮ ರೋಗಗಳು ಆಲೋಪಥಿ ಚಿಕಿತ್ಸೆಯಿಂದ ಗುಣವಾಗುವುದು ಕಷ್ಟ. ತುರಿಕೆ, ಬಾಹ್ಯ ಲಕ್ಷಣಗಳು ತಾತ್ಪೂರ್ವಿಕವಾಗಿ ಶಮನವಾಗುತ್ತವೆ. ಕೆಲವು ಸಲ ಮೂಲ ಕಾರಣಗಳನ್ನು ದೂರೀಕರಿಸಿ ಚಿಕಿತ್ಸೆಮಾಡಿದರೆ (ಟೆರಿಲಿನ್ ಬಟ್ಟೆ ತ್ಯಜಿಸಿ, ಹತ್ತಿಬಟ್ಟೆ ಧರಿಸುವುದು ಇತ್ಯಾದಿ ಕ್ರಮ) ಸಂಪೂರ್ಣವಾಗಿ ಗುಣವಾಗಬಹುದು.

ವಿಶೇಷವಾಗಿ ಜನನೇಂದ್ರಿಯಗಳ ಮೇಲೆ (ಮತ್ತು ಹೆಂಗಸರ ವಿಷಯದಲ್ಲಿ ಒಳಗೆ) ಆಗುವ ಇಸಬು, ಮುಂತಾದ ಫಂಗಸ್ (ಸೂಕ್ಷ್ಮಹಾವಸೆ) ಮೂಲಕವಾದ ಚರ್ಮ ರೋಗಗಳು ತುಂಬಾ ತುರಿಕೆಯನ್ನುಂಟುಮಾಡಿ ಬಹಳ ಕಷ್ಟ ಕೊಡುತ್ತವೆ.

ತೀರಾ ತುರಿಕೆಯಾಗಿ, ತುರಿಸಿಕೊಳ್ಳಲು ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿ ಕೆಲವು ಹೆಂಗಸರು ತುರಿಸಿಕೊಳ್ಳಲು ಪ್ರಯತ್ನಮಾಡಿ ಅವರು ಅತಿಯಾಗಿ ಉದ್ರಿಕ್ತರಾಗಿ ನಾಚಿಕೆಗೆಟ್ಟು ಅಸ್ತೀತಿಯ ಹಾದಿಯಲ್ಲಿ ನಡೆವುದುಂಟು. ನಾರೀ ಕಾಮೋನ್ಮಾದ (Nymphonenai) ಎಂದು ಹೆಸರಿಸುವ ಈ ವ್ಯಾಧಿಯಲ್ಲಿ ಬಹಳ ಸಂದರ್ಭಗಳಲ್ಲಿ ಜನನೇಂದ್ರಿಯದೊಳಗಿನ ಇಸಬು ಅಪರಾಧಿ (Culprit) ಯಾಗಿರುತ್ತದೆ. ಆ ಇಸ ಬನ್ನು ಗುಣಪಡಿಸಿದರೆ, ಅವರು ಇತರ ನಿರೋಗಿ ಹೆಂಗಸರ ಹಾಗೆ ಸಹಜವಾದ (Normal) ರೀತಿಯಲ್ಲಿ ಜೀವನ ಮಾಡಲು ಶಕ್ತರಾಗುತ್ತಾರೆ.

ಇಸಬಿನ (ಹಾಗೂ ಇತರ ಚರ್ಮ ರೋಗಗಳಲ್ಲಿಯ) ಕಾರಣದ ಮೇಲೆ ಚಿಕಿತ್ಸೆ ನಡೆಸುವಾಗ, ಅಂತರ-ಬಾಹ್ಯ ಎರಡೂ ರೀತಿಗಳಲ್ಲಿ ಔಷಧ ಸಂಯೋಜನೆಯನ್ನು ಮಾಡಬೇಕಾಗುತ್ತದೆ.

ಹಳ್ಳಿ ಮದ್ದುಗಳಲ್ಲಿ ಕಹಿಬೇವು ಬಹಳ ಪರಿಣಾಮಕಾರಿ. ಪ್ರತಿನಿತ್ಯ ಹಸಿ ದಿದ್ದಾಗ ಒಂದು ಚಮಚ ಬೇವಿನೆಲೆಗಳ ರಸವನ್ನು (ಸ್ವಲ್ಪ ನೀರುಸೇರಿಸಿ ಜಜ್ಜಿಸಿ ರಸ ತೆಗೆಯಬಹುದು) ಸೇವಿಸುತ್ತ ಬಂದರೆ, ಮೂರು ತಿಂಗಳಲ್ಲಿ ರಕ್ತನಂಜಿನ ಯಾವುದೇ ಚರ್ಮರೋಗ ವಾಸಿಯಾಗುತ್ತದೆ ಎಂದು ಆಯುರ್ವೇದದ ವೈದ್ಯ ಶ್ರೀ ಸುಬ್ರಾಯ ಭಾಗವತ (ಊರಕೇರಿ) ಇವರ ಅನುಭವ. ಒಣಗಿಸಿದ ಬೇವಿನೆಲೆಗಳ ಪುಡಿಯನ್ನು ಸ್ವಲ್ಪ ಅರಿಸಿನ, ಕಾಡುಜೀರಿಗೆಪುಡಿ ಸೇರಿಸಿ ಬಾಹ್ಯಲೇಪನಕ್ಕೆ ಬಳಸಬಹುದು.

ವೃದ್ಧವೈದ್ಯ ಶ್ರೀ ನಾರಾಯಣ ಜಂಬಿಗ (ಉಕ್ಕೇರಿ) ಇವರು ನಾಲ್ಕು ದಿನಗಳಿ ಗೊಮ್ಮೆ ಒಂದು ಚಮಚ ಬೇವಿನೆಲೆಗಳ ರಸ ಸೇವಿಸುತ್ತಿದ್ದರೂ ಸಾಕು ಎಂದಿದ್ದಾರೆ.

ಡಾ॥ ಜಿ. ಆರ್. ಭಟ್ಟ (ಅಗ್ಯ್ಯಾರ್) ಎಂಬುವರು ವಿಜಾಪುರದ 'ವಿನೂತನ ಆಯುರ್ವೇದ ಕಂಪನಿ'ಯವರ "ಪ್ರವಾಗ" ಎಂಬ ಸಂಯುಕ್ತ ಔಷಧ ಮಾತ್ರೆಗಳನ್ನು ಮೂರು ತಿಂಗಳು ಕೊಟ್ಟು ಒಬ್ಬ ಮಹಿಳೆಯ ಇಸಬನ್ನು ಗುಣಪಡಿಸಿರುವದಾಗಿ ನನಗೆ ತಿಳಿಸಿದ್ದಾರೆ.

ಪದೇಪದೇ ನೆಗಡಿಯ ತೊಂದರೆ ಅನುಭವಿಸುತ್ತಿರುವವರು ತಜ್ಞ ಹೋಮಿಯೋ ಪಥಿಯ ಡಾಕ್ಟರರ ಚಿಕಿತ್ಸೆಯನ್ನು ತಿಂಗಳುಗಟ್ಟಲೆ ತೆಗೆದುಕೊಂಡರೆ ಆ ತೊಂದರೆ ಯಿಂದ ಬಿಡುಗಡೆ ಹೊಂದಬಹುದಾಗಿದೆ.

ಅಲರ್ಜಿಯ ಚರ್ಮರೋಗಿಗಳು ವಿಶೇಷವಾಗಿ, ಮತ್ತು ಇತರ ರೋಗಿಗಳೂ ಸಹ, ಕರಿದ ಪದಾರ್ಥಗಳನ್ನು, ಚಹಾ, ಕಾಫಿ, ಮದ್ಯ ಮುಂತಾದ ಪೇಯಗಳನ್ನು (ಧೂಮಪಾನವೂ ಅನಾರೋಗ್ಯಕರ 'ಪೇಯ'ಗಳಲ್ಲಿ ಸೇರುತ್ತದೆ.) ವರ್ಜಿಸುವುದು ಅಥವಾ ತೀರ ಕಡಿಮೆ ಮಾಡುವುದು ಅವಶ್ಯವಾಗಿದೆ.

ಮುಂಬಯಿಯ ಡಾ|| ಚಂದ್ರಶೇಖರ ಜಿ. ಠಕ್ಕರ್ ಅವರು ರಕ್ತನಂಜಿಗೆ ಆಯುರ್ವೇದ ಚಿಕಿತ್ಸೆಯನ್ನು ಸೂಚಿಸಿದುದನ್ನು ಕೆಳಗೆ ಬರೆಯುತ್ತಿದ್ದೇನೆ.

Body & Beauty Care, Bombay, October 1982 Issue.

ಬೃಹತ್ ಹರಿದ್ರಾಖಂಡ ಎಂಬ ಔಷಧವನ್ನು ಮೂರು ಗ್ರಾಮ್ ಪ್ರಮಾಣದಲ್ಲಿ ಬೆಳಿಗ್ಗೆ ಮತ್ತು ರಾತ್ರಿ (ತಡವಾಗಿ) ನೀರಿನೊಡನೆ ಸೇರಿಸಿ ಸೇವಿಸುವುದು ಕ್ರಮೇಣ ಈ ಔಷಧವನ್ನು ಆರು ಗ್ರಾಮ್‌ವರೆಗೆ ಹೆಚ್ಚಿಸಿ, ಹನ್ನೆರಡು ಗ್ರಾಮ್‌ವರೆಗೂ ದಿನಕ್ಕೆ ಎರಡು ಬಾರಿ ಸೇವಿಸುವುದು. ಈ ಚಿಕಿತ್ಸೆ ಅಲರ್ಜಿಗೆ ಪ್ರತಿಬಂಧಕ ಮಾತ್ರ.

ಪ್ರವಾಳ ಪಿಷ್ಟಿ ಎಂಬ ಔಷಧ ಪುಡಿಯನ್ನು ಶುದ್ಧವಾದ, ತಾಜಾ ಗುಲಾಬಿ ನೀರಿನೊಡನೆ (ರೋಸ್‌ವಾಟರ್) ಸೇರಿಸಿ (ಮುಕ್ತಾಪಿಷ್ಟಿಯನ್ನು ಸೇರಿಸಿ) ಇಪ್ಪತ್ತೊಂದು ದಿನ ರಕ್ತನಂಜಿನ ಚರ್ಮಕ್ಕೆ ಉಜ್ಜಬೇಕು, ಇದು ತುರಿಕೆಯನ್ನು ಶಮನಗೊಳಿಸುತ್ತದೆ. ಮತ್ತು ರೋಗಿಯ ರಕ್ತನಂಜಿನ ಪ್ರತಿಬಂಧಕ ಶಕ್ತಿಯನ್ನು ಹೆಚ್ಚಿಸುತ್ತದೆ.

ರಕ್ತಶುದ್ಧಿಗೆ ಮಹಾಮಂಜಿಷ್ಠಾದಿ ಕಷಾಯವನ್ನು ಬಹಳದಿನ ಸೇವಿಸಬೇಕು. ಮಂಜಿಷ್ಠೆಯ ತೊಗಟೆಯ ಕಷಾಯ ಮಾಡಿಕೊಂಡು (ಪ್ರತಿದಿನ) ಸೇವಿಸುತ್ತಿರಬಹುದು. ಅಥವಾ, ಮಹಾಮಂಜಿಷ್ಠಾದಿ ಕಷಾಯ. ಪುನರ್ನವಾರಿಷ್ಟ, ಮತ್ತು ಸಾರಿವಾದ್ಯಾಸವ (ಒಂದೊಂದು ಚಮಚ ಸೇರಿಸಿ) ಇವನ್ನು ಅಷ್ಟೇ ನೀರಿನೊಡನೆ ಸೇರಿಸಿ ತೆಗೆದುಕೊಳ್ಳುವುದೇ ರಕ್ತಕ್ಕೆ ತಂಪನ್ನು ತಂದು, ಮಲಶೋಧನೆಯನ್ನು ಮಾಡುತ್ತದೆ.

ಮನೆಮದ್ದುಗಳು ( ೧ ) ¼ ಅಥವಾ ಅರ್ಧ ಚಮಚ ಅಜವಾನ (ಓಮ) ಪುಡಿ ಮತ್ತು ಬೆಲ್ಲ ಸೇರಿಸಿ ಬೆಳಿಗ್ಗೆ ಮತ್ತು ಮಲಗುವಾಗ ಸೇವಿಸುವುದು ( ೨ ) ಸೈಂಧವ ಲವಣ ಮತ್ತು ತುಪ್ಪ ಸೇರಿಸಿ ತೆಗೆದುಕೊಳ್ಳುವುದು.

**ಪಥ್ಯ:** ಜಡ ಆಹಾರ, ಮಿಠಾಯಿ, ತತ್ತಿಗಳು, ಕೆಲವು ಮೀನು ವರ್ಜ್ಯ ಐಸ್ ಕ್ರೀಮ್, ಚಾಕಲೇಟ್ ವರ್ಜ್ಯ.

# ನೂತನ ಸರ್ಕಾರದ ನೂರು ದಿವಸ :
# ದೃಢನಿಲವು–ದಿಟ್ಟ ಹೆಜ್ಜೆ

ಜನತೆ ನಮಗಿತ್ತಿರುವ ಆದೇಶ, ಅಧಿಕಾರಗಳ ನಿಜವಾದ ಅರ್ಥ—ಈವರೆಗೆ ನೀಡಿದ ಆಶ್ವಾಸನೆಗಳ ಈಡೇರಿಕೆ.

ಈ ನೂರು ದಿನಗಳ ಅವಧಿಯಲ್ಲಿ ಮೂಲಭೂತ ಸ್ವರೂಪದ ಪ್ರಗತಿಪರ ನಿರ್ಧಾರಗಳನ್ನು ಕೈಗೊಂಡು ಜನತೆಗಿತ್ತ ವಚನ ಪಾಲನೆಗೆ ನೂತನ ಸರ್ಕಾರ ಪಣತೊಟ್ಟಿದೆ. ಜನತೆಯ ಆಶೋತ್ತರಗಳ ಸಾಧನೆಯ ಗುರಿಯತ್ತ ನಿಮ್ಮ ಸರ್ಕಾರ ಮಹತ್ವ ಪೂರ್ಣ ಹೆಜ್ಜೆ ಇಟ್ಟಿದೆ.

ಆಡಳಿತಾಧಿಕಾರದ ವಿಕೇಂದ್ರೀಕರಣಕ್ಕೆ ಬದ್ಧವಾದ ನೂತನ ಸರ್ಕಾರ ಎಲ್ಲ ನಗರ ಕಾರ್ಪೊರೇಷನ್ನುಗಳು, ಪುರಸಭೆಗಳು ಹಾಗೂ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಲಿದೆ.

ಹರಿಜನ, ಗಿರಿಜನ ಹಾಗೂ ಹಿಂದುಳಿದ ವರ್ಗಗಳ ಶ್ರೇಯೋಭಿವೃದ್ಧಿ ಸರ್ಕಾರದ ಆದ್ಯಕರ್ತವ್ಯ-ಅವರ ಆರ್ಥಿಕ ಹಾಗೂ ಸಾಮಾಜಿಕ ಏಳಿಗೆಗಾಗಿ ಪ್ರಸ್ತುತವಾದ ನಿರ್ದಿಷ್ಟ ಸಲಹೆಗಳನ್ನು ಮಾಡಲು ಸರ್ಕಾರ, ಹಿಂದುಳಿದ ವರ್ಗಗಳ ಆಯೋಗ ಮತ್ತು ಅಲ್ಪಸಂಖ್ಯಾತರ ಆಯೋಗವನ್ನು ರಚಿಸಿದೆ.

ಹರಿಜನ–ಗಿರಿಜನರ ಯುವಜನಾಂಗದ ಪ್ರತಿಭಾ ಪುರಸ್ಕಾರಕ್ಕಾಗಿ ಪ್ರಾಯಶಃ ದೇಶದಲ್ಲೇ ಪ್ರಥಮವಾದ ವಿನೂತನ ಕ್ರಮವನ್ನು ಕೈಗೊಳ್ಳಲಾಗಿದೆ. ಅದರಂತೆ ರಾಜ್ಯದ ವಿಶ್ವವಿದ್ಯಾನಿಲಯಗಳಿಂದ, ವಿವಿಧ ವಿಷಯಗಳಲ್ಲಿ ಪದವಿ ಪಡೆದ 87 ಪ್ರತಿಭಾವಂತ ವಿದ್ಯಾರ್ಥಿಗಳನ್ನು ಪ್ರತಿ ವರ್ಷ ಕರ್ನಾಟಕ ಸರ್ಕಾರದ ಅಧಿಕಾರಿ ವರ್ಗಕ್ಕೆ ನೇರವಾಗಿ ನೇಮಿಸಿಕೊಳ್ಳಲಾಗುವುದು.

'ಅಂತ್ಯೋದಯ'—ರಾಜ್ಯದ ಪ್ರತಿ ಹಳ್ಳಿಯಲ್ಲಿ ಐದು ಕಡುಬಡ ಕುಟುಂಬಗಳನ್ನು ಆಯ್ಕೆ ಮಾಡಿ, ಅವರಿಗೆ ಸ್ವಾವಲಂಬಿಗಳಾಗಲು ಎಲ್ಲ ಸೌಲಭ್ಯ ಒದಗಿಸಿ, ಬಡತನದ ರೇಖೆಯಿಂದ ಮೇಲೆತ್ತುವ ಕ್ಷೇಮಾಭ್ಯುದಯ ಯೋಜನೆ.

ಕಾರ್ಮಿಕರ ಕನಿಷ್ಠ ವೇತನದ ಪರಿಷ್ಕರಣೆ.

ಕೃಷಿ ಕಾರ್ಮಿಕರು, ಹೊಟೇಲು, ಸಿನಿಮ ಹಾಗೂ ಬೀಡಿ ಕೆಲಸಗಾರರು ಸೇರಿದಂತೆ ಎಲ್ಲ ಉದ್ಯಮಗಳ ಕಾರ್ಮಿಕರಿಗೆ ಅನುಕೂಲ.

ಕಾರ್ಮಿಕರಿಗೆಲ್ಲ ಮೇ ತಿಂಗಳ ಒಂದನೇ ತಾರೀಖು ಸಂಬಳ ಸಹಿತ ರಜೆ.

ಬಹು ದಿನಗಳ ಬೇಡಿಕೆ, ವೃತ್ತಿ ತೆರಿಗೆಯ ರದ್ದು. ತಿಂಗಳಿಗೆ 1200 ರೂಪಾಯಿಗಿಂತ ಕಡಿಮೆ ವೇತನ ಪಡೆಯುವವರು ಮತ್ತು ವರ್ಷಕ್ಕೆ ನಲವತ್ತು ಸಾವಿರ ರೂಪಾಯಿಗಿಂತ ಕಡಿಮೆ ವಹಿವಾಟು ಮಾಡುವ ವ್ಯಾಪಾರಸ್ಥರು ಇನ್ನು ಮುಂದೆ ವೃತ್ತಿ ತೆರಿಗೆ ಕೊಡಬೇಕಾಗಿಲ್ಲ.

ಬೆಲೆ ಏರಿಕೆಯನ್ನು ತಡೆಯಲು ಪರಿಣಾಮಕಾರಿ ಕ್ರಮ. ನ್ಯಾಯಬೆಲೆ ಅಂಗಡಿಗಳ ಮೂಲಕ ಮಾರಾಟ ಮಾಡುವ ಎಲ್ಲ ದರ್ಜೆಯ ಅಕ್ಕಿಯ ಬೆಲೆಯನ್ನು ಗಣನೀಯವಾಗಿ ಕಡಿಮೆ ಮಾಡಲಾಗಿದೆ.

ರೈತರ ಮುಂದಿರುವ ಹಲವಾರು ಸಮಸ್ಯೆಗಳ ನಿವಾರಣೆಯ ಮೊದಲ ಹಂತವಾಗಿ, ವಿವಿಧ ರೀತಿಯ ಸಾಲ ಮರುಪಾವತಿಯಲ್ಲಿ ಸುಮಾರು ಮುವತ್ತಾರು ಕೋಟಿ ರೂಪಾಯಿ ಪರಿಹಾರ ಕೊಡಲಾಗಿದೆ. ಸರ್ಕಾರಕ್ಕೆ ಸಂದಾಯವಾಗದೆ ಉಳಿದಿರುವ ಸಾಲಗಳ ಮನ್ನ. ಭೂಸಾರ ರಕ್ಷಣೆ ಮತ್ತು ಒಡ್ಡು ನಿರ್ಮಾಣದ ಬಾಕಿಯಲ್ಲಿ ಅರ್ಧ ಭಾಗವನ್ನು ನಿಯಮಿತ ಅವಧಿಯ ಒಳಗೆ ತೀರಿಸಿದರೆ, ಉಳಿದರ್ಧ ಮನ್ನಾ. ಜೊತೆಗೆ ಸಹಕಾರಿ ಸಾಲಗಳ ಮರುಪಾವತಿಯಲ್ಲಿ ರಿಯಾಯತಿ.

ರಾಜಕೀಯದಲ್ಲಿ ನೀತಿಯುತ ನಡವಳಿಕೆಯ ಸತ್ಸಂಪ್ರದಾಯಕ್ಕೆ ಮೊದಲ ಹೆಜ್ಜೆ. ಪಕ್ಷಾಂತರದ ಪಿಡುಗನ್ನು ತೆಗೆದುಹಾಕುವುದು. ಪಕ್ಷಾಂತರ ನಿಷೇಧಿಸುವ ವಿಧೇಯಕವನ್ನು ತಂದಿರುವ, ದೇಶದಲ್ಲೇ ಎರಡನೆಯ ರಾಜ್ಯ— ಕರ್ನಾಟಕ.

ಭ್ರಷ್ಟಾಚಾರದ ಮೂಲೋತ್ಪಾಟನೆಗೆ ತೀವ್ರಕ್ರಮ — ಲೋಕ ಆಯುಕ್ತದ ರಚನೆ.

ಹಿಂದುಳಿದ ವರ್ಗಗಳ ಕುಶಲಕರ್ಮಿಗಳ ಉಪಯೋಗಕ್ಕಾಗಿ ಸಾಧನ, ಸಲಕರಣೆಗಳನ್ನು ಒದಗಿಸುವ ಕೈಗಾರಿಕಾ ಕೇಂದ್ರಗಳನ್ನು ರಾಜ್ಯದ ವಿವಿಧ ಕಡೆ ಸ್ಥಾಪಿಸಲಾಗುವುದು.

ವೃದ್ಧಾಪ್ಯವೇತನ ಹಾಗೂ ಅಂಗವಿಕಲರಿಗೆ ಕೊಡುವ ಮಾಸಾಶನವನ್ನು ಐವತ್ತು ರೂಪಾಯಿಗೆ ಹೆಚ್ಚಿಸಲಾಗಿದೆ.

ಜನತೆಯ ಕುಂದುಕೊರತೆಗಳನ್ನು ವಿಚಾರಿಸಲು ಹೊಸ ವ್ಯವಸ್ಥೆಯನ್ನೇ ರೂಪಿಸಿದೆ. ಅದಕ್ಕಾಗಿ ಪ್ರತ್ಯೇಕ ಮಂತ್ರಿ ಶಾಖೆಯನ್ನೇ ರಚಿಸಿದೆ.

ಕನ್ನಡವನ್ನು ಎಲ್ಲ ಮಟ್ಟದಲ್ಲೂ ಆಡಳಿತ ಭಾಷೆಯಾಗಿ ಮಾಡಿರುವುದು ಮಾತ್ರವಲ್ಲ, ಇದು ಕಳೆದ ಫೆಬ್ರವರಿ 15 ರಿಂದ ಕಡ್ಡಾಯವಾಗಿ, ಯಶಸ್ವಿಯಾಗಿ ಕಾರ್ಯಗತವಾಗುತ್ತಿದೆ.

ಪ್ರಪ್ರಥಮ ಜನತಾ ಸರ್ಕಾರ ರಚಿಸಿ ಇತಿಹಾಸದಲ್ಲಿ ಹೊಸ ಅಧ್ಯಾಯ ಪ್ರಾರಂಭಿಸಿದ ಕರ್ನಾಟಕದಲ್ಲಿ ಇಡೀ ಸಮಾಜದ ಅಭ್ಯುದಯ ಅದರಲ್ಲೂ, ಗ್ರಾಮೀಣ ಜನರ ದಲಿತ ವರ್ಗದವರ ಏಳಿಗೆ ಸಾಧನೆಯೇ ನಮ್ಮ ದೃಢ ಸಂಕಲ್ಪ.

**ಪ್ರಕಟಣೆ: ವಾರ್ತಾ ಮತ್ತು ಪ್ರಚಾರ ಇಲಾಖೆ,**
**ಕರ್ನಾಟಕ ಸರ್ಕಾರ, ಬೆಂಗಳೂರು.**

ಅಖಿಲ ಭಾರತ ವೀರಶೈವ ಮಹಾ ಸಭೆಯ

೨೦ ನೇ ಮಹಾಧಿವೇಶನ ಅಧ್ಯಕ್ಷ

# ಶ್ರೀ ಈಶ್ವರ ಮಲ್ಲಪ್ಪ ಮಗ್ದುಂ



೧೯೨೧ ಫೆಬ್ರವರಿ ೨೫ ರಂದು ಜನನ ಬೆಳಗಾ
ಜಿಲ್ಲೆಯ ಚಿಕ್ಕೋಡಿ ತಾಲ್ಲೂಕು ಅಂಕಲಿ ಹುಟ್ಟೂರ
ಇನಾಂ ಭೂಮಿಯ ಮನೆತನ ಬ್ರಿಟಿಷ್ ಸರಕಾ
ಕೊಟ್ಟ ಇನಾಂ ಕರಾರು ಪತ್ರ .ಮುಖ ಪತ್ರಧಾರಕ
ಅಥವಾ ಮೊಕ್ತಿಯಾರರು ಎಂಬ ಹೆಸರು ಕಾ
ಕ್ರಮೇಣ ಮೊಕ್ತಿಯಾರ್ .ಮಗ್ದುಂ, ಆಗಿ ಪರಿವರ್ತ
ಮನೆತನಕ್ಕೆ ಅದೇ ಹೆಸರು

ಮಗ್ದುಂ ಮನೆತನಕ್ಕೆ ಸಮಾಜ ಸೇವೆ
ಸುದೀರ್ಘ ಪರಂಪರೆ ತಂದೆ ಮಲ್ಲಪ್ಪ ಅಧ್ಯಾಪ
ವೃತ್ತಿಯ ಸತ್ಯ ಶುದ್ಧ ಕಾಯಕ ಜೀವಿ. ತಾ
ಗಂಗವ್ವ ಪತಿಯ ನೆರಳು ಇಬ್ಬರದೂ ಶರ
ಜೀವನ. ಈಶ್ವರ ಮಲ್ಲಪ್ಪ ಮಗ್ದುಂ ಹೆತ್ತವರ
ಹೆಸರು ತಂದ ಪ್ರತಿಭಾವಂತ ಪ್ರಾಥಮಿಕ ಶಿಕ್ಷ
ದಿಂದ ಸ್ನಾತಕೋತ್ತರ ಹಂತದವರೆಗೆ ಎಲ್ಲ ಪರೀಕ್ಷೆಗಳಲ್ಲೂ ಪ್ರಥಮಸ್ಥಾನ. ಜಿ. ಎ
ಪ್ರೌಢಶಾಲೆ ಬೆಳಗಾಂ ಲಿಂಗರಾಜ ಕಾಲೇಜಿನಲ್ಲಿ ಅಭ್ಯಾಸ ನಂತರ ಮುಂಬಯಿನ
ತಾಂತ್ರಿಕ ಶಿಕ್ಷಣ ೧೯೪೫ ರಲ್ಲಿ ಬಿ. ಇ. ಪದವಿ ಪರೀಕ್ಷೆಯಲ್ಲಿ ಮುಂಬಯಿ ವಿಶ್ವವಿದ
ಲಯಕ್ಕೆ ಪ್ರಥಮ ಸ್ಥಾನ.

ಮುಂಬಯಿ ಲೋಕೋಪಯೋಗಿ ಇಲಾಖೆಯಲ್ಲಿ ಪ್ರಥಮದರ್ಜೆ ಇಂಜಿನಿಯರ
ಆಗಿ ನೇಮಕ. ಹುಬ್ಬಳ್ಳಿ ಭೂಮರೆಡ್ಡಿ ಇಂಜಿನಿಯರಿಂಗ್ ಕಾಲೇಜಿನ ಪ್ರಾಂಶುಪ
ಲರು. ಮುಂಬೈ ರಾಜ್ಯದ ನೀರಾವರಿ ವಿಭಾಗದ ಸಂಶೋಧನೆ ಮತ್ತು ಅಭಿವೃ
ವಿಭಾಗದಲ್ಲಿ ಎಗ್ಸಿಕ್ಯೂಟಿವ್ ಇಂಜಿನಿಯರ್, ಉಪಕಾರ್ಯದರ್ಶಿ, ೧-೧೧-೧೯೫೬
ನಂತರ ವಿಶಾಲ ಮೈಸೂರು ರಾಜ್ಯಕ್ಕೆ ವರ್ಗ. ೧೯೫೬ ರ ವರೆಗೆ ರಾಜ್ಯದ ನೀ
ವರಿ ಮತ್ತು ತಾಂತ್ರಿಕ ಇಲಾಖೆಗಳಲ್ಲಿ ವಿವಿಧ ಹುದ್ದೆ, ರಾಜ್ಯ ತಾಂತ್ರಿಕ ಶಿಕ್ಷಣ ಇಲ
ಖೆಯ ನಿರ್ದೇಶಕರಾಗಿ, ಅಖಿಲ ಭಾರತ ತಾಂತ್ರಿಕ ಶಿಕ್ಷಣ ಸಮಿತಿ ಉಪಾಧ್ಯ

ರಾಗಿ ಎಲ್. ಆರ್. ಡಿ. ಇ ಅಧ್ಯಕ್ಷರಾಗಿ ರೂರ್ಕಿ ವಿಶ್ವವಿದ್ಯಾನಿಲಯ ಮತ್ತು ಸೂರತ್ಕಲ್ ಇಂಜಿನಿಯರಿಂಗ್ ಕಾಲೇಜಿನ ಆಡಳಿತ ಮಂಡಳಿ, ಕರ್ನಾಟಕ ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ ಸೇವೆ.

ಹತ್ತು ವರ್ಷಗಳ ಕಾಲ ನೀರಾವರಿ ಇಲಾಖೆಯ ಚೀಫ್ ಇಂಜಿನಿಯರ್, ರಾಷ್ಟ್ರೀಯ ನಿರ್ಮಾಣ ನಿಗಮದ ನಿರ್ದೇಶಕರು, ಕೃಷ್ಣ ಮೇಲ್ದಂಡೆ, ಘಟಪ್ರಭಾ, ಹೇಮಾವತಿ, ಕಪಿನಿ, ಹಾರಂಗಿ ಈ ಎಲ್ಲ ದೊಡ್ಡ ನೀರಾವರಿ ಯೋಜನೆಗಳಿಗೆ ತಜ್ಞ ತಾಂತ್ರಿಕ ಮಾರ್ಗದರ್ಶನ, ಬೆಂಗಳೂರು ಜಲ ಮಂಡಳಿಯ ಅಧ್ಯಕ್ಷತೆ, ಕಾವೇರಿ ನೀರು ಸರಬರಾಜು ಯೋಜನೆಯ ಯಶಸ್ವಿ ನಿರ್ವಹಣೆ.

೧೯೭೨ ರಲ್ಲಿ ಸೂಪರ್ ಟೈಂ ದರ್ಜೆಗೆ ಬಡ್ತಿ. ರಾಜ್ಯದ ಪ್ರಥಮ ಇಂಜಿನಿಯರ್ ಇನ್‌ಚೀಫ್ ಮತ್ತು ಸರಕಾರದ ವಿಶೇಷ ಕಾರ್ಯದರ್ಶಿ. ೧೯೭೨-೭೩ ರಲ್ಲಿ ತಲೆದೋರಿದ ಭೀಕರ ಅಭಾವ ಪರಿಸ್ಥಿತಿ ಸಮಸ್ಯೆ ಪರಿಹಾರದಲ್ಲಿ ದಕ್ಷ ಆಡಳಿತ ಕಾರ್ಯ ನಿರ್ವಹಣೆ ನಿವೃತ್ತಿಯ ನಂತರವೂ ಬೆಂಗಳೂರು ಜಲಮಂಡಳಿ ಮೈಸೂರು ಪವರ್ ಕಾರ್ಪೋರೇಷನ್ ರಾಜ್ಯ ಗೃಹ ನಿರ್ಮಾಣ ಮಂಡಳಿ, ನೀರಾವರಿ ಸಲಹಾ ಮಂಡಳಿ ವರುಣಾ ನಾಲಾ ಸಮಿತಿಗಳಲ್ಲಿ ಸೇವೆ, ಇಂಜಿನಿಯರ್ ಸ್ಟೇಟ್‌ಮನ್ ಎಂಬ ಹೆಸರು ಪಡೆದ ಹೆಗ್ಗಳಿಕೆ.

೧೯೬೪ ರಲ್ಲಿ ಇಂಗ್ಲೇಂಡ್, ೧೯೬೯ ರಲ್ಲಿ ಬರ್ಲಿನ್ ಮತ್ತು ೧೪೭೯ ರಲ್ಲಿಮೆಕ್ಸಿಕೋಗಳಲ್ಲಿ ನಡೆದ ಅಂತರ ರಾಷ್ಟ್ರೀಯ ಅಧಿವೇಶನಗಳಲ್ಲಿ ಭಾರತದ ಪ್ರತಿನಿಧಿ.

ಬಸವ ಸಮಿತಿ, ಅಖಿಲ ಭಾರತ ವೀರಶೈವ ಮಹಾಸಭೆ, ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿನಿಧಿ ಸಂಸ್ಥೆ ಈಶ್ವರ ಸೇವಾ ಮಂಡಲಿ, ವಿಶ್ವ ಕಲ್ಯಾಣ ಮಿಷನ ಪೂರ್ಣಪ್ರಜ್ಞ ವಿದ್ಯಾಕೇಂದ್ರ, ಪ್ಯಾಲೇಸ್ ಆರ್ಚರ್ಡ್ ಕ್ಷೇಮಾಭಿವೃದ್ಧಿ ಸಂಸ್ಥೆಗಳಲ್ಲಿ ಕ್ರಿಯಾತ್ಮಕ ಪಾತ್ರ.

---

## ಬಸವಣ್ಣನೇ ಸರ್ವಸ್ವ

ಬಸವಣ್ಣನೇ ತಾಯಿ ಬಸವಣ್ಣನೇ ತಂದೆ
ಬಸವಣ್ಣನೇ ಪರಮ ಬಂಧುವೆನಗೆ
ವಸುಧೀಶ ಕಪಿಲ ಸಿದ್ಧಮಲ್ಲಿಕಾರ್ಜುನ
ನಿಮ್ಮ ಹೆಸರಿಟ್ಟ ಗುರು ಬಸವಣ್ಣನಯ್ಯಾ

—ಶ್ರೀ ಸಿದ್ಧರಾಮೇಶ್ವರ

---

# ಅಖಿಲ ಭಾರತ ವೀರಶೈವ ಮಹಾಸಭೆಯ ೨೦ ನೇ ಅಧಿವೇಶನದ ಸಂಕ್ಷಿಪ್ತ ವರದಿ

ಮೈಸೂರು: ವಿಶ್ವಧರ್ಮದ ವಿಶಾಲ ತತ್ವವನ್ನೊಳಗೊಂಡ ವೀರಶೈವದ ಸ್ಪಷ್ಟ ಅರಿವಿನೊಡನೆ, ಮಹಾನುಭಾವಿ ಬಸವಾದಿ ಪ್ರಮಥರು ಹನ್ನೆರಡನೆಯ ಶತಮಾನದಲ್ಲಿ ಸಾಧಿಸಿದ ಸಮಗ್ರ ಕ್ರಾಂತಿಯ ಅನುಭವದೊಡನೆ ಅಖಿಲ ಭಾರತ ವೀರಶೈವ ಮಹಾಸಭೆಯ ೨೦ ನೆಯ ಅಧಿವೇಶನದ ಅಧ್ಯಕ್ಷ ಶ್ರೀ ಐ. ಎಂ. ಮುಗ್ದುಂ ಅವರು "ಉಜ್ವಲ ಪರಂಪರೆಯನ್ನು ಪಡೆದಿರುವ ನಾವು ವೀರಶೈವ ಧರ್ಮದ ನಿಜವಾದ ತಳಹದಿಯ ಮೇಲೆ ಶಕ್ತಿಯುತವೂ ಸದೃಢವೂ ಆದ ರಾಷ್ಟ್ರ ಪುನರ್‌ನಿರ್ಮಾಣದ ಕಾರ್ಯದಲ್ಲಿ ನಿರತ ರಾಗೋಣ" ಎಂದು ತಿಳಿಸಿದರು.

ದಿನಾಂಕ ೨೪-೪-೮೩ ರಂದು ಮೈಸೂರಿನ ವಿಶಾಲ ಪ್ರಾಂಗಣ ದಸರಾ ವಸ್ತು ಪ್ರದರ್ಶನ ಮೈದಾನದಲ್ಲಿ ಜರುಗಿದ ೨೦ ನೆಯ ಅಧಿವೇಶನದಲ್ಲಿ ತಾತ್ಕಾಲಿಕ ಅಧ್ಯಕ್ಷ ಶ್ರೀ ಕೆ. ಎಂ. ನಂಜಪ್ಪ ಅವರಿಂದ ಅಧ್ಯಕ್ಷರಾಗಿ ಅಧಿಕಾರ ಸ್ವೀಕಾರನಂತರ ಮಾತ ನಾಡುತ್ತಿದ್ದ ಶ್ರೀ ಈಶ್ವರಪ್ಪ ಮುಗ್ದುಂ ಅವರು "ವೀರಶೈವ ಒಂದು ಜಾತಿಯಲ್ಲ ಅದೊಂದು ತತ್ವ ಸಿದ್ಧಾಂತ" ಎಂಬ ಮಾತನ್ನು ಪುನಃ ಪುನಃ ಜ್ಞಾಪಿಸಿದರು.

**೧ ರೂ. ನಿಧಿ:** ೧೯ ನೇ ಅಧಿವೇಶನದ ಅಧ್ಯಕ್ಷರು ಲಿಂ. ಶ್ರೀ ಜೆ. ಬಿ. ಮಲ್ಲಾ ರಾಧ್ಯ ಅವರು ನೀಡಿದ್ದ ೨೦ ಅಂಶಗಳ ಕಾರ್ಯಕ್ರಮವನ್ನೊಳಗೊಂಡಂತೆ ಶ್ರೀ ಮುಗ್ದುಂ ಅವರು ವೀರಶೈವರನ್ನು ಚೇತರಿಸುವ ೨೫ ಅಂಶಗಳ ಕಾರ್ಯಕ್ರಮ ನೀಡಿದ್ದಾರೆ. ಶ್ರೀ ಜೆ. ಬಿ. ಮಲ್ಲಾರಾಧ್ಯರವರು ಕಲ್ಪಿಸಿದ "ತಲೆಗೆ ೧ ರೂ. ನಿಧಿಗೆ ವಿಶೇಷ ಒತ್ತು ಕೊಟ್ಟಿದ್ದಾರೆ. ಮಠಾಧೀಶರನ್ನು ಕರೆದುಕೊಂಡು, ಶಾಸಕರನ್ನು ಜೊತೆಗೂಡಿಸಿ ಕೊಂಡು, ಮಹಿಳೆಯರು ಮತ್ತು ಯುವಕರನ್ನು ಸೇರಿಸಿಕೊಂಡು ಅಖಿಲ ಭಾರತ ವೀರಶೈವ ಮಹಾಸಭೆಯು ಯಾವ ಸದುದ್ದೇಶ ಮತ್ತು ಸತ್ಪ್ರೇರಣೆಗಳಿಂದ ಸ್ಥಾಪಿತ ವಾಯಿತೋ ಅವುಗಳನ್ನು ಕಾರ್ಯಗತಗೊಳಿಸುವ ಧೀರ ಸಂಕಲ್ಪವನ್ನು ತೋರಿಸಿದ್ದಾರೆ.

ಜೆ. ಬಿ. ಮಲ್ಲಾರಾಧ್ಯ ಮಂಟಪದಲ್ಲಿ ಹೆಣ್ಣು ಗಂಡುಗಳು ಸರಿಸಮವಾಗಿ ಸಮಾ ವೇಶಗೊಂಡ ಸುಮಾರು ೨೫ ಸಾವಿರ ಜನಸ್ತೋಮವನ್ನು ಸ್ವಾಗತಿಸಿ ಭಾಷಣ ಮಾಡಿದ ಸ್ವಾಗತಾಧ್ಯಕ್ಷ ಶ್ರೀ ಕೆ. ಪಿ. ಶಾಂತಮೂರ್ತಿ ಅವರು ಮಹಾನುಭಾವಿ ಬಸವಣ್ಣನವರ ಬಗ್ಗೆ ರಾಷ್ಟ್ರಪಿತ ಪೂಜ್ಯ ಗಾಂಧೀಜಿಯವರು ಆಡಿದ ಮಾತುಗಳನ್ನು ಪ್ರಮುಖವಾಗಿ ಎತ್ತಿ ಹೇಳಿದರು. ೧೯೨೪ ರಲ್ಲಿ ಕಾಂಗ್ರೆಸ್ಸಿನ ಬೆಳಗಾವಿ ಅಧಿವೇಶನ

ಕಾಲದಲ್ಲಿ ಗಾಂಧೀಜಿ ಅವರು ಹೀಗೆ ನುಡಿದಿದ್ದರು. "ಬಸವೇಶ್ವರರು ಎಷ್ಟು ತತ್ವಗಳನ್ನು ಆಚರಿಸಿ ಉಪದೇಶ ಮಾಡಿದರೋ ಅಷ್ಟೆಲ್ಲವನ್ನು ಆಚರಿಸುವದು ನನ್ನಿಂದ ಸಾಧ್ಯವಿಲ್ಲ. ಅಸ್ಪೃಶ್ಯತಾನಿವಾರಣೆ, ಕಾಯಕ ಪಾಲನೆ, ಸ್ತ್ರೀಪುರುಷ ಸಮಾನತೆ ಒಂದೆರಡೇ ನಾನು ಆಚರಿಸುತ್ತಲಿದ್ದೇನೆ. ಬಸವಣ್ಣನವರ ಧರ್ಮಾನುಯಾಯಿಗಳಾದ ತಾವು ಅವರು ಬೋಧಿಸಿದ ತತ್ವಗಳನ್ನು ಆಚರಣೆಯಲ್ಲಿ ತಂದರೆ ಭಾರತ ಭೂಮಿಯನ್ನಷ್ಟೇ ಏಕೆ ಜಗತ್ತನ್ನೇ ಉದ್ಧಾರಮಾಡಬಲ್ಲಿರಿ."

ಹರ್ಷ : ೨೦ ನೇ ಅಧಿವೇಶನವನ್ನು ಉದ್ಘಾಟಿಸಿದ ರಾಜ್ಯಪಾಲ ಶ್ರೀ ಅಶೋಕನಾಥ ಬ್ಯಾನರ್ಜಿ ಅವರು ವೀರಶೈವರ ಸಮ್ಮೇಳನದಲ್ಲಿ ಭಾಗವಹಿಸುತ್ತಿದ್ದುದಕ್ಕೆ ಹರ್ಷ ವ್ಯಕ್ತಪಡಿಸಿ ಕರ್ನಾಟಕದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಪುನರುತ್ಥಾನಕ್ಕೆ ವೀರಶೈವ ಸ್ವಾಮಿಗಳು ಸಲ್ಲಿಸಿದ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿದರು. ಬಸವೇಶ್ವರರ ಕಲ್ಯಾಣ ಕ್ರಾಂತಿಯ ಬೀಜಗಳನ್ನು ಇಂದಿಗೂ ವೀರಶೈವರಲ್ಲಿ ಕಾಣಬಹುದಾಗಿದೆಯೆಂದು ಹೇಳಿದರು.

ತಾವು ಉದ್ಘಾಟನೆಗೆ ಬರುವಾಗ ಕೆಲವೊಂದು ಜನ ಬರಲಾಗದಂತೆ ಸಮ್ಮೇಳನದ ವಿರುದ್ಧ ಮತಪ್ರದರ್ಶನ ಮಾಡಿದುದನ್ನು ಪ್ರಸ್ತಾಪಿಸಿ ಶ್ರೀ ಬ್ಯಾನರ್ಜಿ ಅವರು ಭಾರತದ ಧರ್ಮನಿರಪೇಕ್ಷತೆಯ ಅರ್ಥ ಎಲ್ಲ ಧರ್ಮಗಳಿಗೆ ಸಮಾನವಾಗಿ ಪುರಸ್ಕರಿಸುವುದೇ ಆಗಿದೆ ಹೊರತಾಗಿ ಧರ್ಮನಿರಾಕರಣೆ ಅಲ್ಲವೆಂಬುದನ್ನು ಸ್ಪಷ್ಟಪಡಿಸಿದರು. ವೀರಶೈವರು ಒಂದೆಡೆ ಸೇರಿ ತಮ್ಮತನವನ್ನು ಅರಿತುಕೊಳ್ಳುವ ಹಕ್ಕು ಅವರಿಗಿದೆ ಎಂದರು.

ಉದ್ಘಾಟನಾ ಸಮಾರಂಭದಲ್ಲಿಯೇ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿ ಮಾತನಾಡಿದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ ಅವರು "ಜನಹಿತದ ದೃಷ್ಟಿಯಿಂದ ಬಸವಣ್ಣನವರು ಮಾಡಿದ ತ್ಯಾಗ ಬಲಿದಾನಗಳನ್ನು ಜಗತ್ತಿನ ಯಾವ ಭಾಗದಲ್ಲಿಯೂ ಯಾವ ಮಹಾ ಪುರುಷನೂ ಮಾಡಲಿಲ್ಲವೆಂದು" ಹೃದಯ ತುಂಬಿ ಹೇಳಿದರು.

ಮುಖ್ಯಮಂತ್ರಿಗಳ ಭಾಷಣದ ವೇಳೆಯಲ್ಲಿ ಸಭಿಕರ ಮೂಲೆ ಮೂಲೆಯಿಂದ ಹಾವನೂರು ವರದಿ ರದ್ಧತಿಯ ಕೂಗುಗಳು ಕೇಳಿಬಂದವು. ಹಾವನೂರು ವರದಿಯು ಶ್ರೇಷ್ಠನ್ಯಾಯಾಲಯದಲ್ಲಿ ಪ್ರಶ್ನೆಗೊಳಗಾಗಿರುವದು : ಹಿಂದುಳಿದ ವರ್ಗಗಳ ಎರಡನೆ ಆಯೋಗ ರಚಿಸಲಾಗುವದೆಂದು ಹಿಂದಿನ ಸರ್ಕಾರ ಶ್ರೇಷ್ಠ ನ್ಯಾಯಾಲಯಕ್ಕೆ ಬರೆದುಕೊಂಡಿರುವದು, ಆ ಪ್ರಕಾರ ಶ್ರೀ ಬಿ. ವೆಂಕಟಸ್ವಾಮಿ ಆಯೋಗ ರಚಿತವಾಗಿರುವದು ಇವೆಲ್ಲ ಘಟನೆಗಳ ಹಿನ್ನೆಲೆಯಲ್ಲಿ ಹಾವನೂರು ವರದಿ ಆಧಾರದ ಸರ್ಕಾರಿ ಆಜ್ಞೆಯನ್ನು ರದ್ದು ಪಡಿಸಬಹುದೇ ಸಭಿಕರೇ ಆಲೋಚಿಸಬೇಕೆಂದು ಶ್ರೀ ರಾಮಕೃಷ್ಣ ಹೆಗಡೆ ಅವರು ತಮ್ಮ ಕೈಗಳು ಬಂಧಿತವಾಗಿರುವುದನ್ನು ತೆರೆದು ತೋರಿಸಿದರು.

ಶ್ರೀ ಮಲ್ಲಾರಾಧ್ಯರ ಬಗೆಗಿನ ಪುಸ್ತಕವನ್ನು ಬಿಡುಗಡೆ ಮಾಡಿ ಮಾತನಾಡಿ ಮಾಜಿ ಉಪರಾಷ್ಟ್ರಪತಿ ಬಸವಸಮಿತಿಯ ಅಧ್ಯಕ್ಷ ಶ್ರೀ ಬಿ. ಡಿ. ಜತ್ತಿಯವರು ಶ್ರೀ ಮಲ್ಲಾರಾಧ್ಯರು ಅರ್ಧಕ್ಕೆ ನಿಲ್ಲಿಸಿ ಹೋದ ವೀರಶೈವ ಸಮಾಜ ಸಂಘಟನೆಯ ಕಾರ್ಯವನ್ನು ಪ್ರತಿಭಾನ್ವಿತರಾದ ಶ್ರೀ ಐ. ಎಂ. ಮುಗ್ದುಂ ಅವರು ಮುಂದುವರಿಸಿಕೊಂಡು ಹೋಗಲಿ ಎಂದು ಹಾರೈಸಿದರು.

ಮಾಜಿ ಮುಖ್ಯಮಂತ್ರಿ ಶ್ರೀ ಎಸ್. ನಿಜಲಿಂಗಪ್ಪ ಅವರು "ವೀರಶೈವ ವೈಭವ" ಪ್ರದರ್ಶನವನ್ನು ಉದ್ಘಾಟಿಸಿ ಮಾತನಾಡಿದರು.

ಇದೇ ಸಂದರ್ಭದಲ್ಲಿ ಲಿಂಗೈಕ್ಯ ಜೆ. ಬಿ. ಮಲ್ಲಾರಾಧ್ಯರವರ ಪತ್ನಿ ಶ್ರೀಮತಿ ಪಾರ್ವತಮ್ಮ ಆರಾಧ್ಯ ಅವರನ್ನು ಶ್ರೀಮತಿ ಲೀಲಾ ಚೆನ್ನಯ್ಯ ಅವರು ಸನ್ಮಾನಿಸಿದರು.

ಸ್ವಾಗತ ಸಮಿತಿಗೆ ಶ್ರೀ ರಕ್ಷೆಯಂತಿದ್ದ ಸುತ್ತೂರು ವೀರಸಿಂಹಾಸನಾಧ್ಯಕ್ಷ ಜಗದ್ಗುರು ಶ್ರೀ ಶಿವರಾತ್ರೀಶ್ವರ ರಾಜೇಂದ್ರ ಮಹಾಸ್ವಾಮಿಗಳವರು ಷಟಸ್ಥಲ ಧ್ವಜಾರೋಹಣವನ್ನು ಮಾಡಿ ಮಾರ್ಮಿಕವಾದ ಷಟಸ್ಥಲ ಸಂದೇಶವನ್ನು ನೀಡಿದರು.

**ಸಭಾ ಸಂಚಾಲನ**: ಕಾರ್ಯಾಧ್ಯಕ್ಷ ಶ್ರೀ ಹೆಚ್. ಸಿ. ಚಿಕ್ಕವೀರಯ್ಯ ಅವರು ಸಂದೇಶವಾಚನ ಮಾಡಿದರಲ್ಲದೆ ಶಾಸಕ ಶ್ರೀ ಹೆಚ್. ಗಂಗಾಧರನ್ ಅವರು ಸಭಾ ಸಂಚಾಲನೆ ಮಾಡಿದರು. ಶ್ರೀ ಕೆ. ಎಂ. ಶಿವಶಂಕರ ಅವರು ಆಭಾರ ಮನ್ನಣೆ ಮಾಡಿ ಮಾಡಿದರು. ಕಾರ್ಯದರ್ಶಿ ಶ್ರೀ ಕೆ. ಎಂ. ಶಿವಲಿಂಗಯ್ಯ ಅವರು ಸ್ಮರಣ ಫಲಕಗಳನ್ನು ನೀಡಿದರು.

ಜರೀಪೇಟ ಧರಿಸಿ ಪಂಚೆಜುಬ್ಬ ತೊಟ್ಟು ಮದುಮಗನಂತೆ ಕಾಣುತ್ತಿದ್ದ ಹೊಸ ಅಧ್ಯಕ್ಷ ಈಶ್ವರ ಮಗ್ದುಂ ಅವರ ಮೆರವಣಿಗೆಯು ಪ್ರಮುಖ ಬೀದಿಗಳ ಮುಖಾಂತರ ಬಹು ವೈಭವದೊಡನೆ ನೆರವೇರಿತು, ನಾನಾ ಜಿಲ್ಲೆಗಳ ವೀರಶೈವ ಯುವಕರ ತಂಡಗಳು ಜಯ ಜಯಕಾರಗಳೊಂದಿಗೆ ಮೆರವಣಿಗೆ ಮೆರಗು ನೀಡಿದ್ದರು. ನಂದಿಧ್ವಜಗಳು ವೀರಗಾಸೆಯವರ ಒಡಬುಗಳು ವೀರಶೈವ ವೈಶಿಷ್ಟ್ಯಗಳನ್ನು ತಂದಿದ್ದವು.

೨೦ ನೇ ಅಧಿವೇಶನದಲ್ಲಿ ಈ ಕೆಳಗಿನಂತೆ ನಿರ್ಣಯಗಳನ್ನು ಅವಿರೋಧವಾಗಿ ಅಂಗೀಕರಿಸಲಾಯಿತು.

**ಅಧಿಕೃತ ನಿರ್ಣಯಗಳು:** ೧) ವೀರಶೈವ ಸಮಾಜದ ಕ್ಷೇಮಾಭ್ಯುದಯಕ್ಕೆ ಅತ್ಯಂತ ಕಳಕಳಿಯಿಂದ ದುಡಿದು ಈ ಕೆಳಗೆ ಕಂಡ ಗುರುಗಳು ಮತ್ತು ಸಮಾಜದ

ಪ್ರಮುಖರು ಲಿಂಗೈಕ್ಯರಾಗಿರುವುದನ್ನು ಅಖಿಲ ಭಾರತ ವೀರಶೈವ ಮಹಾ ಸಭೆಯ ಇಪ್ಪತ್ತನೆಯ ಅಧಿವೇಶನವು ಹೃತ್ಪೂರ್ವಕವಾಗಿ ಸ್ಮರಿಸಿ ಅವರ ಆತ್ಮಕ್ಕೆ ಸ್ಥಿರಶಾಂತಿಯನ್ನು ಕೋರುತ್ತದೆ.

೧) ಶ್ರೀ ರಂಭಾಪುರಿ ಜಗದ್ಗುರು ೧೦೦ಲ ಶ್ರೀ ಶ್ರೀ ವೀರಗಂಗಾಧರ ಶಿವಾಚಾರ್ಯ ಮಹಾ ಸ್ವಾಮಿಗಳವರು ೨) ಶ್ರೀ ಶ್ರೀ ಚನ್ನವೀರದೇಶಿಕೇಂದ್ರ ಸ್ವಾಮಿಗಳವರು ೩) ಶ್ರೀ ಶ್ರೀ ಒಳಬಳ್ಳಾರಿತಾತನವರು ೪) ಅಧ್ಯಕ್ಷ ಜೆ. ಬಿ. ಮಲ್ಲಾರಾಧ್ಯರವರು ೫) ಡಾ. ಡಿ. ಸಿ. ಪಾವಟೆಯವರು ೬) ಶ್ರೀ ಸೋಲೂರು ಸಿದ್ದಪ್ಪನವರು ೭) ಶ್ರೀ ಪ್ರಭುರಾಜ ಲಿಗಾಡೆಯವರು ೮) ಶ್ರೀಮತಿ ಬಳ್ಳಾರಿ ಸಿದ್ಧಮ್ಮನವರು ೯) ಕೊಂಡಜ್ಜಿ ಬಸಪ್ಪನವರು ೧೦) ಶ್ರೀ ಜಿ. ಸಿ. ವೀರಪ್ಪನವರು ೧೧) ಜೆ. ಪಿ. ಜೇವೂರು ೧೨) ಲಿಂಗರಾಜ ದೇಸಾಯಿಯವರು ೧೩) ಶ್ರೀ ಡಿ. ಎಚ್. ರುದ್ರಪ್ಪನವರು ೧೪) ಶ್ರೀ ನಾಗರಾಜ ಮಣಿಗಾರವರು ೧೫) ಶ್ರೀ ಡಿ. ಆರ್. ಮುರುಘೇಂದ್ರಪ್ಪ ೧೬) ಶ್ರೀ ಪಿ. ಜೂಗಪ್ಪನವರು ೧೭) ಶ್ರೀ ಎಚ್. ಎಂ. ನಾಗಪ್ಪನವರು ೧೮] ಶ್ರೀ ಯಾಲೆಹಳ್ಳಿ ಶಿವರುದ್ರಪ್ಪನವರು.

೨. ಮಹಾಸಭೆಯ ಹಿಂದಿನ ಅಧ್ಯಕ್ಷರುಗಳು ಮತ್ತು ವಿಶೇಷವಾಗಿ ಹತ್ತೊಂತ್ತನೆಯ ಅಧಿವೇಶನಾಧ್ಯಕ್ಷ ಲಿಂ. ಜೆ. ಬಿ. ಮಲ್ಲಾರಾಧ್ಯ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ನಿರೂಪಿಸಿರುವ ಸಮಾಜ ಕ್ಷೇಮಾಭ್ಯುದಯದ ಪ್ರಮುಖ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇಪ್ಪತ್ತನೆಯ ಅಧಿವೇಶನಾಧಕ್ಷ ಶ್ರೀ ಈಶ್ವರ ಮಲ್ಲಪ್ಪ ಮಗ್ದುಂ ಅವರು ತಮ್ಮ ಭಾಷಣದಲ್ಲಿ ತಿಳಿಸಿರುವ ಕಾರ್ಯಕ್ರಮಗಳನ್ನು ಈ ಮಹಾ ಅಧಿವೇಶನವು ಹೃತ್ಪೂರ್ವಕವಾಗಿ ಅಂಗೀಕರಿಸಿ ಅವುಗಳನ್ನು ಕೈಗೊಳ್ಳುವಂತೆ ಇಪ್ಪತ್ತನೆಯ ಮಹಾಧಿವೇಶನವು ಸರ್ವಾನುಮತದಿಂದ ತೀರ್ಮಾನಿಸುತ್ತದೆ.

೩. ಮುಂದಿನ ಐದು ವರ್ಷಗಳಲ್ಲಿ ಮಹಾಸಭೆಯು ಕೆಳಗೆ ಕಂಡ ನಾಲ್ಕು ಅಂಶಗಳನ್ನು ಅರ್ಥಪೂರ್ಣವಾಗಿ ಕಾರ್ಯಗತಗೊಳಿಸಬೇಕೆಂದು ಈ ಅಧಿವೇಶನವು ನಿರ್ದೇಶಿಸುತ್ತದೆ.

ಅ] ಅಸ್ಪೃಶ್ಯತಾ ನಿವಾರಣೆಗೆ ಎಲ್ಲ ರೀತಿಯ ಕ್ರಮಗಳನ್ನು ಕೈಗೊಳ್ಳುವುದು.

ಆ] ಪ್ರತಿಯೊಬ್ಬ ವೀರಶೈವನೂ ಇಷ್ಟಲಿಂಗವನ್ನು ಧರಿಸುವಂತೆ ಮಾಡುವುದು.

ಇ] ವೀರಶೈವ ಪಂಗಡ ಒಳಪಂಗಡಗಳ ಭೇದಗಳನ್ನು ತೊಡೆದು ಹಾಕು ವುದು.

ಈ] ಸಮಾಜದ ಹಿಂದುಳಿದ ವರ್ಗಗಳ ಏಳಿಗೆಗಾಗಿ ಅಗತ್ಯ ಕ್ರಮ ಕೈಗೊಳ್ಳುವುದು.

**ಹಾವನೂರು ವರದಿ :** ೪. ಹಾವನೂರು ಆಯೋಗದ ವರದಿಯ ಆಧಾರದ ಮೇಲೆ ರಾಜ್ಯ ಸರ್ಕಾರವು ದಿನಾಂಕ ೪-೩-೭೭ ರ ಸಂ. ಡಿ. ಪಿ. ಎ. ಆರ್. ಎಸ್. ಬಿಸಿ ೭೭ ) ಆಜ್ಞೆ ವೀರಶೈವ ಸಮಾಜದ ಮೇಲೆ ಭಾರಿ ಆಘಾತ ಉಂಟು ಮಾಡಿದ್ದು ಈಚೆಗೆ ಸುಪ್ರೀಂ ಕೋರ್ಟು ನಿರ್ದೇಶನದ ಮೇಲೆ ರಾಜ್ಯ ಸರಕಾರವು ಹೊಸದಾಗಿ ಮತ್ತೊಂದು ಹಿಂದುಳಿದವರ ಆಯೋಗವನ್ನು ರಚಿಸಿರುವುದರಿಂದ ೧೯೭೭ ರ ಸರ್ಕಾರಿ ಆಜ್ಞೆಯನ್ನು ಕೂಡಲೇ ರದ್ದುಪಡಿಸಿ ಅದಕ್ಕಿಂತ ಮೊದಲು ಇದ್ದ ಸ್ಥಿತಿಯನ್ನು ಉಳಿಸಬೇಕೆಂದೂ ಹೊಸ ಹಿಂದುಳಿದ ವರ್ಗಗಳ ಆಯೋಗದವರಿಗೆ ಕರಾರುವಾಕ್ಕಾದ ಆಧಾರಗಳನ್ನು ಒದಗಿಸಲು ಮುಕ್ತವಾದ ಅವಕಾಶ ಕಲ್ಪಿಸಬೇಕೆಂದೂ ಈ ಅಧಿವೇಶನವು ರಾಜ್ಯ ಸರಕಾರವನ್ನು ಒಕ್ಕೊರಲಿನಿಂದ ಒತ್ತಾಯ ಪಡಿಸುತ್ತದೆ.

೫. ಭಾರತ ಜನಗಣತಿಗಾಗಿ ಈಗ ಗೊತ್ತು ಮಾಡಿರುವ ನಮೂನೆಗಳಲ್ಲಿ ವೀರಶೈವ ಅಥವಾ 'ಲಿಂಗಾಯತ' ಎಂದು ನಮ್ಮ ಧರ್ಮವನ್ನು ನಮೂದಿಸಲು ಅವಕಾಶವಿಲ್ಲದಿರುವುದರಿಂದ ಧರ್ಮಾನುಯಾಯಿಗಳು ವೀರಶೈವ ಧರ್ಮವನ್ನು ಸೂಚಿಸಲು ಜನಗಣತಿ ನಮೂನೆಯಲ್ಲಿ ಸ್ಪಷ್ಟವಾದ ಸೂಚನೆ ನೀಡಬೇಕಾದುದು ಈ ಅಧಿವೇಶನವು ಭಾರತ ಜನಗಣತಿ ಕಮೀಷನರ ಅವರನ್ನು ಒತ್ತಾಯ ಪಡಿಸುತ್ತದೆ.

೬. ವೀರಶೈವ ಸಮಾಜ ಬಂಧುಗಳ ಆರ್ಥಿಕ ಸ್ಥಿತಿಯನ್ನು ಸುಧಾರಿಸುವ ದೃಷ್ಟಿಯಿಂದ ಕೃಷಿ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮ ಕ್ಷೇತ್ರಗಳಲ್ಲಿ ಉತ್ಸಾಹಿ ವೀರಶೈವ ಉದ್ಯಮಿಗಳಿಗೆ ಅಗತ್ಯವಾದ ಮಾಹಿತಿ, ತರಬೇತಿ, ಹಣಕಾಸು ಸೌಲಭ್ಯ ಮತ್ತು ತಾಂತ್ರಿಕ ಸಲಹೆಗಳನ್ನು ಒದಗಿಸಲು ಅಥವಾ ಅವುಗಳನ್ನು ಪಡೆಯುವಂತೆ ನೆರವಾಗಲು ಮಹಾ ಸಭೆಯ ಆಶ್ರಯದಲ್ಲಿ ತಜ್ಞರ ವಿಭಾಗವೊಂದನ್ನು ರಚಿಸಬೇಕೆಂದು ಈ ಅಧಿವೇಶನವು ಸರ್ವಾನುಮತದಿಂದ ತೀರ್ಮಾನಿಸುತ್ತದೆ.

**ಯುವಕರು :** ೭. ವೀರಶೈವ ಯುವಜನರ ಅತ್ಯಂತ ಗಂಭೀರವಾಗಿರುವ ಸಮಸ್ಯೆಯನ್ನು ತೀವ್ರವಾಗಿ ಗಮನಿಸಿರುವ ಈ ಅಧಿವೇಶನವು ಯುವಜನರಿಗೆ ಶಿಕ್ಷಣ, ತರಬೇತಿ ಮತ್ತು ಉದ್ಯೋಗಾವಕಾಶಗಳನ್ನು ಕಲ್ಪಿಸಲು ಮಹಾಸಭೆಯು ವ್ಯವಸ್ಥಿತ ಕ್ರಮಗಳನ್ನು ಕೈಗೊಳ್ಳಬೇಕೆಂದೂ ಅರ್ಹ ಮತ್ತು ಪ್ರತಿಭಾವಂತ ವೀರಶೈವ ಯುವಕರಿಗೆ ವಿವಿಧ ಕ್ಷೇತ್ರಗಳಲ್ಲಿ ಸಾಧ್ಯವಿರುವ ಕಡೆ ಉದ್ಯೋಗ ದೊರಕಿಸಿ

ಕೊಡಲು ಮಹಾಸಭೆಯಲ್ಲಿ ಉದ್ಯೋಗ ವಿಭಾಗವೊಂದನ್ನು ತೆರೆಯಬೇಕೆಂದೂ ತೀರ್ಮಾನಿಸುತ್ತದೆ. ಇದರ ಜೊತೆಗೆ, ಇನ್ನು ಮುಂದೆ ಹೆಚ್ಚಾಗಿ ವೃತ್ತಿಪೂರ್ವ ತರಬೇತಿ ಕೇಂದ್ರಗಳನ್ನು ಆರಂಭಿಸಲು ವೀರಶೈವ ಶಿಕ್ಷಣ ಸಂಸ್ಥೆಗಳು ಆದ್ಯತೆ ನೀಡಬೇಕೆಂದೂ ಈ ಅಧಿವೇಶನವು ಒತ್ತಾಯಪಡಿಸುತ್ತದೆ.

೮. ವೀರಶೈವ ಮಠಾಧೀಶರು ವೀರಶೈವ ಧರ್ಮ ಪ್ರಚಾರ ಕಾರ್ಯವನ್ನು ವ್ಯಾಪಕವಾಗಿ ನಡೆಸುವುದಲ್ಲದೆ, ಇಷ್ಟಪಡುವ ಧರ್ಮಾಸಕ್ತರಿಗೆ ಲಿಂಗದೀಕ್ಷೆ ನೀಡಬೇಕೆಂದೂ ಧಾರ್ಮಿಕ ಕ್ಷೇತ್ರದಲ್ಲಿ ಎಲ್ಲಾ ಮಠಾಧೀಶರೂ ಪರಸ್ಪರ ಸಮನ್ವಯದಿಂದ ಕೆಲಸ ಮಾಡಬೇಕೆಂದೂ ಈ ಅಧಿವೇಶನ ಮನವಿ ಮಾಡಿಕೊಳ್ಳುತ್ತದೆ.

೯. ಅಖಿಲಭಾರತ ವೀರಶೈವ ಮಹಾಸಭೆಯ ಕೇಂದ್ರಕಾರ್ಯಾಲಯಕ್ಕಾಗಿ ಬೆಂಗಳೂರು ನಗರದಲ್ಲಿ ಸೂಕ್ತ ನಿವೇಶನ ಪಡೆದು ಒಂದು ಕಾರ್ಯಾಲಯ ಕಟ್ಟಡವನ್ನು ನಿರ್ಮಿಸಲು ಮಹಾಸಭಾಧ್ಯಕ್ಷರು ಕ್ರಮ ಕೈಗೊಳ್ಳಬೇಕೆಂದು ಈ ಅಧಿವೇಶನ ಸೂಚಿಸುತ್ತದೆ.

೧೦. ವೀರಶೈವ ಧರ್ಮಪ್ರಚಾರ ಮತ್ತು ವೀರಶೈವ ಸಮಾಜ ಬಂಧುಗಳ ಸಾಂಸ್ಕೃತಿಕ ಸಂಪರ್ಕದ ದೃಷ್ಟಿಯಿಂದ ಅಖಿಲಭಾರತ ವೀರಶೈವ ಮಹಾಸಭೆಯ ಆಶ್ರಯದಲ್ಲಿ ಸಂಚಾರಿ ಘಟಕವೊಂದನ್ನು ರಚಿಸಬೇಕೆಂದು ಈ ಅಧಿವೇಶನವು ಸೂಚಿಸುತ್ತದೆ.

---

## ಕಾರಣಿಕ ಪುರುಷ

ಮಾರಾರಿಯ ಬೆಸನದಿಂದ ಧಾರುಣಿಗೆ ಅವತರಿಸಿ,
ಸಾರಾಯ ಸದ್ಭಕ್ತಿಯ ತೋರಿದನು ಶಿವಶರಣರೆಲ್ಲರಿಗೆ,
ಭಕ್ತಿಯ ಸಂಚವ ಮುಕ್ತಿಯ ಭೇದವ–
ನುಪದೇಶಿಸಿದನು ಬಸವಣ್ಣ ಶಿವಶರಣರೆಲ್ಲರಿಗೆ,
ನಿತ್ಯ ಲಿಂಗಾರ್ಚನೆಯೊಳಗೆ ಎನ್ನನಿರಿಸಿ,
ರಕ್ಷಿಸಿದಾತ ಬಸವಣ್ಣ ಕಾಣಾ ಕಲಿದೇವಯ್ಯಾ.

—ಮಡಿವಾಳ ಮಾಚಿದೇವರು

# ಉದ್ಯೋಗ (ಕಿರುಗತೆ)

—ಪ. ರಾಮಕೃಷ್ಣ ಶಾಸ್ತ್ರಿ

ಅದು ಇಬ್ರಾಯಿಯ ಬೀಡಿ ಬ್ರಾಂಚು. ಹತ್ತಾರು ಮಂದಿ ಹರಯದ ಹುಡುಗಿಯರು ಅಲಂಕಾರ ಮಾಡಿಕೊಂಡು ಬೀಡಿಯ ಕಟ್ಟುಗಳನ್ನು ಹೊತ್ತು ತರುವ ದೃಶ್ಯ ದಿನವಿಡೀ ಅಲ್ಲಿ ಕಾಣಬಹುದು. ಬರುತ್ತಾರೆ, ಕಿಸಿಕಿಸಿ ನಗುತ್ತಾರೆ, ಬೀಡಿ ಚಕ್ಕರ್ ಹಮ್ಮದನಿಗೆ ಲೇವಡಿ ಮಾಡುತ್ತಾರೆ. ಕಣ್ಮಿಂಚು ಎಸೆಯುತ್ತಾರೆ, ಎಲೆ ತಂಬಾಕು ತೆಗೆದುಕೊಂಡು ಹೋಗುತ್ತಾರೆ. "ಹಮ್ಮದಾಕ, ಪ್ರೋದು ಬರೊಡೆಯೆ?" ಅಂತ ಹಮ್ಮದನ ಕಿವಿ ಹಿಂಡಿ ಹೋಗುವ ಉಷಾರಿಯ ತರುಣಿಯರೂ ಇದ್ದರು.

ರಿಂದಮ್ಮ ಅವರಿಗಿಂತ ಎಲ್ಲ ದೂರ. ಅವಳಾಯಿತು, ಅವಳ ಬೀಡಿಯಾಯಿತು. ಆ ಊರಿನಲ್ಲೇ ಒಳ್ಳೆಯ ಶಿಕ್ಷಕರೆಂದು ಹೆಸರು ಮಾಡಿದ್ದ ಶಂಕರಪ್ಪ ಮಾಸ್ತರರ ಹೆಂಡತಿ ಆಕೆ. ಮಾಸ್ತರರು ದುರಂತವೊಂದರಲ್ಲಿ ತೀರಿಕೊಂಡು ಕೆಲವು ವರ್ಷಗಳಾಗಿದ್ದವು. ಜೊತೆಗೆ ಹೆಂಡತಿ ರಿಂದಮ್ಮನೂ ಮಗಳು ವಾರಿಜಳೂ ಅನಾಥರಾಗಿದ್ದರು. ಯಾವ ಪಿತ್ರಾರ್ಜಿತ ಆದಾಯವಿಲ್ಲದಿದ್ದರೂ ರಿಂದಮ್ಮ ಬಂಧುಗಳ ಬಾಗಿಲಿಗೆ ಹೋಗಿ ಸೆರಗೊಡ್ಡಲಿಲ್ಲ. ದಿನವಿಡೀ ಕುಳಿತು ಒಂದೆರಡು ಸಾವಿರ ಬೀಡಿ ಕಟ್ಟಿ ಅದರಿಂದ ಬಂದ ಕೂಲಿಯಲ್ಲಿ ತಾನು ಅರೆಹೊಟ್ಟೆಯುಂಡರೂ ವಾರಿಜಳಿಗೆ ಯಾವುದಕ್ಕೂ ಕಮ್ಮಿ ಮಾಡದೆ ಬೆಳೆಸಿದಳು. ಗಂಡ ಸತ್ತ ಮೇಲೆ ರಿಂದಮ್ಮ ಹೇಗಿದ್ದಾಳೆ ಎಂದು ಬೇಳ ತುದಿಯಿಂದ ಕುಟ್ಟಿ ಹಣ್ಣೋ ಕಾಯೋ ಅಂತ ಪರೀಕ್ಷಿಸಲು ಬಂದ ಪುರುಷಸಿಂಹರೂ ಇದ್ದರು. ಆದರೆ ಮರ್ಯಾದೆಯ ಗೆರೆಯೊಳಗೇ ಮುದುಡಿ ಕುಳಿತ ಅವಳು ತನ್ನ ಮಗಳಿಗೂ ಕಲಿಸುತ್ತಿದ್ದ ಮೊದಲ ಪಾಠ ಕೂಡ ಮಾನಮರ್ಯಾದೆಯದೇ ಆಗಿತ್ತು.

ತನ್ನ ಸಂಪಾದನೆಯಿಂದಲೇ ಮಗಳನ್ನು ಕಾಲೇಜಿನವರೆಗೂ ರಿಂದಮ್ಮ ಓದಿಸಿದಳು. ಮಗಳಿಗೆ ಯಾವುದಾದರೂ ಒಳ್ಳೆಯ ಉದ್ಯೋಗ ಸಿಕ್ಕಿದರೆ ಅನಂತರ ಕಳೆದ ಕಾಲವನ್ನು ಮರೆತು ಕಾಲು ಚಾಚಿ ಕುಳಿತುಕೊಳ್ಳಬಹುದೆಂಬ ಮಹದಾಶಯ ಅವಳದಾಗಿತ್ತು. ಆದರೆ ವಾರಿಜ ಉದ್ಯೋಗಕ್ಕಾಗಿ ಹಾಕಿಕೊಂಡ ಅರ್ಜಿಗಳೆಷ್ಟು, ಇಂಟರ್ವ್ಯೂಗಾಗಿ ಅಲೆದದ್ದೆಷ್ಟು....ಎಲ್ಲವೂ ನಿರರ್ಥಕ. ಕೆಲವು ಕಂಪೆನಿಗಳು ಕೇಳಿದ ಭಾರೀ ಮೊತ್ತದ ಡೊನೇಷನ್ ಕೊಡುವುದರಲ್ಲಿ ಅವಳು ಹಿಂದೆಗೆದರು. ಕೊನೆಗೆ ಬೇಕಾದ್ದು ಶಿಫಾರಸಿನ ನೆರವು....ರಾಜಕಾರಣಿ ಪಾಚಪ್ಪನವರ ರಸಿಕತೆಯ ಕಣ್ಣುಗಳು ಅವಳ ಇಪ್ಪತ್ತರ ದೇಹದ ಉಬ್ಬು ತಗ್ಗುಗಳ ಮೇಲೆ ಅರ್ಥಗರ್ಭಿತವಾಗಿ ಹರಡಿದಾಗ ವಾರಿಜ, ಅವರ ನೆರವಿಗಾಗಿ ಕಾಯದೆ ಹುಲ್ಲೆಯಂತೆ ಹೆದರಿ ಓಡಿದ್ದಳು.

ಎಲ್ಲಿಯೂ ವಾರಿಜಳಿಗೆ ನೌಕರಿ ಸಿಗುವುದೇ ಇಲ್ಲವೆಂದಾಗ ರಿಂದಮ್ಮನ ಮೊಗದಲ್ಲಿ ಶಾಶ್ವತವಾಗಿ ಮೂಡಿದ ಚಿಂತೆಯ ಗೆರೆಗಳನ್ನು ಇಬ್ರಾಯಿ ನೋಡಿದ. ಹದಿನೆಂಟು ವರ್ಷಗಳಿಂದ ತನ್ನ ಬ್ರಾಂಚಿನಿಂದಲೇ ಬೀಡಿ ಕಟ್ಟುತ್ತಿರುವ ರಿಂದಮ್ಮನ ಮೇಲೆ ಅವನಿಗೆ ಎಲ್ಲಿಲ್ಲದ ವಿಶ್ವಾಸ. ಹತ್ತು ರೂಪಾಯಿ ಸಾಲ ಕೊಡಿ ಅಂತ ಒಮ್ಮೆಯೂ ಆಕೆ ಕೇಳಿ ದವಳಲ್ಲ. ಮರ್ಯಾದೆಯ ಅಂಚು ಮೀರಿದವಳಲ್ಲ. ಆದ್ದರಿಂದ ಅವನು ಅನುಕಂಪದಲ್ಲಿ ಹೇಳಿದ್ದ. "ರಿಂದಮ್ಮ, ನೀವ್ಯಾಕೆ ಚಿಂತಿಸ್ತೀರಾ? ನಿಮ್ಮ ಮಗಳಿಗೆ ಕೈತುಂಬ ವೇತನ ತರುವ ಉದ್ಯೋಗ ನಾನು ತೆಗೆಸಿಕೊಡ್ತೇನೆ. ಏರ್‌ಕಂಡೀಷನ್ಡ್ ರೂಮಿನಲ್ಲಿ ಕೆಲಸ. ಸಾವಿರಾರು ರೂಪಾಯಿ ಸಂಬಳ.

"ಎಲ್ಲಿ"? ಕುತೂಹಲದಿಂದ ರಿಂದಮ್ಮನಿಗೆ ಕಿವಿ ನಿಮಿರಿತ್ತು. ಆದರೆ ಆ ಕೆಲಸ ದುಬಾಯಿಯಲ್ಲಿ ಎಂದಾಗ ಆಕೆ ಕಳವಳಗೊಂಡಿದ್ದಳು. "ಅಷ್ಟು ದೂರದಲ್ಲಿ ಹೋದರೆ ಏನಾಗುತ್ತದೊ?"

"ಆಗುವುದೇನು ಏನೂ ಆಗುವುದಿಲ್ಲ. ನಮ್ಮ ದೇಶದ ಲಕ್ಷಾಂತರ ಜನ ಅಲ್ಲಿ ನೌಕರಿಯಲ್ಲಿದ್ದಾರೆ. ಪೇದ್ರು ಪುರ್ಬುವಿಗೆ ಕುಡಿಯಲು ಗಂಜಿಗೆ ಗತಿಯಿರಲಿಲ್ಲ. ಅವರ ಮಗಳು ದುಬಾಯಿಗೆ ಹೋದ ಮೇಲೆ ಹೇಗಿದಾರೆ ನೋಡಿ. ಮೈತುಂಬ ಬಂಗಾರ, ಟೇರಿಸ್ ಮನೆ, ಟೇಪ್-ರೆಕಾರ್ಡರ್! ರಾಮ ಮಣಿಯಾಣಿಗಳ ಮನೆಯಲ್ಲಿ ಬಂಗಾ ರಿನ ಬಿಸ್ಕೆಟು ಉಂಟು ಹೌದಾ? ಅದೆಲ್ಲವೂ ಗಲ್ಫ್ ರಾಷ್ಟ್ರದ್ದೇ....ಯೋಚಿಸಿ ನೋಡಿ. ಆಗುವುದಾದರೆ ಹೇಳಿ. ನನ್ನ ಸ್ನೇಹಿತ ಅಲ್ಲಿನ ಒಬ್ಬ ದಲ್ಲಾಳಿ. ಅವನ ಮುಖಾಂತರ ಒಂದೇ ತಿಂಗಳಿನಲ್ಲಿ ನೌಕರಿ ಸಿಗುತ್ತದೆ. ಎರಡು ವರ್ಷ ಅಲ್ಲಿ ದುಡಿದು ಗಳಿಸಿದ ಹಣ ದೊಂದಿಗೆ ಇಲ್ಲಿಗೆ ಬಂದರೆ ಸಾಯುವವರೆಗೂ ಕೂತುಣ್ಣಬಹುದು. ನಿಮ್ಮ ಮಗಳಿಗೆ ದೊಡ್ಡ ಕುಳ ನೋಡಿ ಮದುವೆ ಮಾಡಬಹುದು!" ಇಬ್ರಾಇ ಭಾಷಣ ಬಿಗಿದ.

ಮದುವೆ ಎಂದಾಗ ರಿಂದಮ್ಮನ ಕಿವಿ ನಿಗುರಿತ್ತು. ಬೊಂಬಾಯಿಯಿಂದ ಅವಳ ಅಣ್ಣನ ಮಗ ಪತ್ರ ಬರೆದಿದ್ದ. "ಇಲ್ಲಿ ಎಷ್ಟು ಚೆಂದದ ಹುಡುಗಿಯರಿದ್ದಾರೆ ಗೊತ್ತಾ? ಆದರೆ ನಾನು ಮದುವೆಯಾಗೋದು ಮಾತ್ರ ನಿನ್ನ ಮಗಳನ್ನೇ ಹೊರತು ಇನ್ನೊಬ್ಬ ರನ್ನಲ್ಲ" ಅಂತ.

ಕಳಿಸುವುದೋ ಬೇಡವೊ-ರಿಂದಮ್ಮ ತೂಗಾಡಿದಳು. ತನ್ನ ಮಗಳು ಎಲ್ಲಿ ಹೋದರೂ ಜೀವ ಹೋದರೆ ಕೂಡ ಮರ್ಯಾದೆ ಕಳಕೊಳ್ಳುವವಳಲ್ಲ ಎಂಬ ನಂಬುಗೆ ಅವಳಿಗಿತ್ತು. ಅವಳ ಕಣ್ಣೆದುರೇ ಹಲವು ಹುಡುಗಿಯರು ದುಬಾಯಿಗೆ ಹೋಗಿ ಹಣದ ರಾಸಿಯನ್ನು ತಂದದ್ದೂ ಹೌದು. ಸುಖಜೀವನದ ಕನಸು ಅವಳನ್ನು ಈ ಕೆಲಸಕ್ಕೆ ಒಡಂಬಡಿಸಿತು. ಇಬ್ರಾಯಿಯ ನೆರವಿನಿಂದ ದುಬಾಯಿಗೆ ಮಗಳನ್ನು ಕಳಿಸಲು

ಬೇಕಾದ ಏರ್ಪಾಟುಗಳೂ ಒದಗಿದುವು. ಸಾವಿರದ ಒಂದು ಸಲ ಮರ್ಯಾದೆಯ ನೆನಪನ್ನು ಒತ್ತಿ ಹೇಳಿ ಮಗಳನ್ನು ಆಕೆ ಕಳಿಸಿಕೊಟ್ಟಳು. "ನನಗೆ ಅಷ್ಟು ಗೊತ್ತಿಲ್ಲವೆ ಅಮ್ಮ ನನ್ನನ್ನು ಬೆಳೆಸಲು, ಓದಿಸಲು ನೀನೆಷ್ಟು ಕಷ್ಟಪಟ್ಟಿದ್ದಿ ಅಂತ. ನಾನೆಂದಿಗೂ ನೀನು ಹಾಕಿದ ಗೆರೆ ಮೀರುವ ಮಗಳಲ್ಲ" ಎಂದಿದ್ದಳು ವಾರಿಜ.

ಹೀಗೆ ವಾರಿಜ ಹೋಗಿ ಎಷ್ಟು ಸಮಯ ಕಳೆದರೂ ಒಂದೇ ಒಂದು ಪತ್ರ ಬರೆಯಲಿಲ್ಲ. ರಿಂದಮ್ಮ ತವಕದಿಂದ ಕಾದಳು. ಇಬ್ರಾಯಿಯೊಂದಿಗೆ ವಿಚಾರಿಸೋಣವೆಂದರೆ ಅವನು ಬಸ್ಸು ಅಪಘಾತದಲ್ಲಿ ಸತ್ತಿದ್ದ. ಬೇರೆ ಯಾರೂ ಆವಳ ನೆರವಿಗೆ ಬರುವವರಿಲ್ಲ. ನಿರಾಸೆಯಿಂದ ತಲೆಗೆ ಕೈಹೊತ್ತಳು. ಕಟೀಲಿಗೆ ಹೂವಿನ ಪೂಜೆ ಹರಕೆ ಹೇಳಿಕೊಂಡಳು. ದುಬೈಗೆ ಹೋದ ಹಲವರೊಂದಿಗೆ ವಾರಿಜಳ ಬಗೆಗೆ ವಿಚಾರಿಸಿದಳು. ಯಾರೊಬ್ಬರೂ ಏನೊಂದೂ ಹೇಳಲಿಲ್ಲ.

ನಿರಾಸೆಯ ನೀರಿನಲ್ಲಿ ರಿಂದಮ್ಮ ಮುಳುಗಿದ್ದಾಗ ವರ್ಷಗಳ ಮೇಲೆ ವರ್ಷಗಳು ಕಳೆದುಹೋದವು. ಅತ್ತೂ ಅತ್ತೂ ಅವಳ ಕಣ್ಣೀರ ಕೆರೆ ಬತ್ತಿಹೋಗಿತ್ತು. ಅಂತೂ ಮಗಳು ಬದುಕಿಲ್ಲ ಅಂದುಕೊಳ್ಳುತ್ತಿದ್ದಾಗಲೇ ಒಂದು ದಿನ ಬಂದಿದ್ದಳು ವಾರಿಜ. ಅರೇ, ಗುರುತು ಸಿಗದಂತೆ ಬದಲಾಯಿಸಿದಾಳೆ. ಆನೆ ಸೊಂಡಿಲಿನಂತಿವೆ ತೊಡೆಗಳು, ಟೊಮ್ಯಾಟೊದಂತೆ ಗಲ್ಲಗಳು, ಬಿಳಿ ಬಣ್ಣ, ಎಲ್ಲಿ ನೋಡಿದರೂ ಮಾಂಸದ ಮುದ್ದೆ, ಚೆಲುವೇ ಚೆಲುವು. ನೋಟಿನ ಕಟ್ಟುಗಳನ್ನು, ಒಡವೆಗಳ ರಾಶಿಯನ್ನು ತಾಯಿಯ ಎದುರು ಇಟ್ಟಳು. ಅಲ್ಲಿಂದ ತಂದಿದ್ದ ಸಲಕರಣೆಗಳಿಗೆ ಲೆಕ್ಕವೇ ಇಲ್ಲ.

ರಿಂದಮ್ಮನಿಗೆ ಎಷ್ಟು ಮಾತನಾಡಿದರೂ ಮುಗಿಯದು, ಏನೆಲ್ಲ ಹೇಳಬೇಕೋ ತಿಳಿಯದು. "ಮುಂಬಯಿಂದ ಅನಂತ ಭಾವನ ಪತ್ರ ಬಂದಿತ್ತು...." ಎಂದಳು.

ವಾರಿಜಳ ಮುಖ ಅರಳಲಿಲ್ಲ. ಬೊಗಸೆಯಿಂದ ಮುಖ ಮುಚ್ಚಿಕೊಂಡಳು. "ಅಮ್ಮ ಅನಂತ ಭಾವ ಬೇರೆ ಯಾರನ್ನಾದರೂ ಮದುವೆಯಾಗಲಿ. ನನ್ನನ್ನು ಕಾಯುವುದು ಬೇಡ. ನಾನು ನಿನಗೆ ದ್ರೋಹ ಮಾಡಿದೆ. ನಾನಾಗಿ ಮಾಡಲಿಲ್ಲ. ಅರಬೀ ಭಾಷೆಯಲ್ಲಿ ಬರೆದ ಕರಾರು ಪತ್ರ ಹಾಗಿತ್ತು. ಅದಕ್ಕೆ ಸಹಿ ಮಾಡಿದ ಕಾರಣ ನನ್ನ ತೇಜೋವಧೆ ಆಯಿತು" ಎಂದು ಹೇಳಿದಳು.

"ನೀನೇನು ಹೇಳುತ್ತಿದ್ದೀಯೋ ನನಗೆ ಅರ್ಥವಾಗುತ್ತಿಲ್ಲ" ರಿಂದಮ್ಮ ಕೇಳಿದಳು.

"ಇನ್ನೂ ಬಿಡಿಸಿ ಹೇಳಬೇಕೇ ಅಮ್ಮ? ಎಣ್ಣೆ ದೊರೆಗಳು ಏರ್ ಕಂಡೀಷನ್ಡ್ ರೂಮಿನಲ್ಲಿ ನಾಲ್ಕು ವರ್ಷ ನನ್ನ ದೇಹ ಸುಖವನ್ನು ಉಂಡರು... ಈ ಹಣ, ಒಡವೆ

ಎಲ್ಲಾ ಅದರ ಫಲ. ಕರಾರು ಮುಗಿದ ಮೇಲೆ ನನ್ನನ್ನು ರಣಹದ್ದುಗಳ ಹಿಂದೆ ಕಳಿಸಿದರು. ನಾನೊಬ್ಬಳೇ ಅಲ್ಲ ಇಲ್ಲಿಂದ ಹೋದ ನೂರಾರು ಹೆಣ್ಣುಗಳಿಗೂ ಅಲ್ಲಿ ಆಗುತ್ತಿರುವ ಅವಸ್ಥೆ ಇದೆ. ಇಲ್ಲಿಂದ ಕರೆದೊಯ್ಯುವ ದಲ್ಲಾಳಿಗಳು ಮಾಡುವ ಮಹಾ ಮೋಸವಿದು.”

ನೂರು ಸಿಡಿಲುಗಳು ಒಂದೇ ಸಲ ರಿಂದಮ್ಮನ ನೆತ್ತಿಗೆ ಅಪ್ಪಳಿಸಿದುವು. ಅವಳ ಶರೀರದ ಮೇಲೆ ಭೂತ ಆವೇಶವಾಗಿತ್ತು. ಮಗಳು ತಂದ ಹಣದ ಕಟ್ಟುಗಳನ್ನು ಆಕೆ ಸಿಕ್ಕ ಸಿಕ್ಕ ಕಡೆಗೆ ಎಸೆದಳು, ಒಡವೆಗಳನ್ನು ತೂರಿದಳು. ಮಗಳ ಕತ್ತು ಹಿಡಿದು ಹೊರಗೆ ದಬ್ಬಿದಳು. ಮಗಳು ಅನಂತರ ಎಲ್ಲಿ ಹೋದಳೋ ಯಾರೂ ಕಾಣಲಿಲ್ಲ.

ಮೊನ್ನೆ ಗಡಂಗಿನ ಪಕ್ಕದಲ್ಲಿ ಭಿಕ್ಷೆ ಬೇಡುವ ಹೆಣ್ಣು ಮುದುಕಿಯೊಬ್ಬಳ ಶವ ನರಿ-ನಾಯಿ ಕಿತ್ತು ತಿಂದು ಛಿದ್ರವಾಗಿತ್ತು. ಕೊಳೆತು ನಾರಿದ ಮೇಲೆ ಪೋಲೀಸರು ಬಂದರು. ಶವಕ್ಕಿಷ್ಟು ಮಣ್ಣು ಮಾಡಿದರು. “ಬೇವಾರ್ಸಿ, ಇಲ್ಲಿ ಬಂದು ಸತ್ರೆ ನಾವೇನು ಇವಳ ಮಕ್ಕಳಾ” ಅಂತ ಶಾಪ ಹಾಕಿದರು. ಆ ಮುದುಕಿ ಮರ್ಯಾದೆಗಾಗಿ ಪರಿತಪಿಸಿದ ರಿಂದಮ್ಮ ಎಂದು ಯಾರೂ ಗುರುತು ಹಚ್ಚಲಿಲ್ಲ.

(ಘಟನೆ ಅಕ್ಷರಶಃ ನಿಜ—ಸ್ಥಳ, ನಾಮಧೇಯಗಳು ಕಾಲ್ಪನಿಕ)

---

## ಮಂತ್ರ ಪುರುಷ

‘ಬಸವ’ ಎಂಬ ಮೂರಕ್ಷರ ಹೃದಯ ಕಮಲದಲ್ಲಿ ನೆಲೆಗೊಂಡಡೆ,
ಅಭೇದ್ಯ ಭೇದ್ಯವಾಯಿತ್ತು; ಅಸಾಧ್ಯ ಸಾಧ್ಯವಾಯಿತ್ತು.
ಇಂತು ಬಸವಣ್ಣನಿಂದ ಲೋಕಲೌಕಿಕದ ಕುಭಾಷೆಯ ಕಳೆದು,
ಲೋಕಾಚರಣೆಯನಗಳೆದು ಭಕ್ತಿ ಬರವಪ್ಪುದು,
ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನ ಕಾರುಣ್ಯದಿಂದ.

—ಚನ್ನಬಸವಣ್ಣನವರು

## ಪರಮ ವಿರಕ್ತ

ಸತಿಯ ಕಂಡು ವ್ರತಿಯಾದ ಬಸವಣ್ಣ,
ವ್ರತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ,
ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯಾ ಬಸವಣ್ಣ,
ಗುಹೇಶ್ವರಾ, ನಿಮ್ಮಲ್ಲಿ ಬ್ರಹ್ಮಚಾರಿಯಾದವನು ಬಸವಣ್ಣನೊಬ್ಬನೆ.

—ಅಲ್ಲಮಪ್ರಭುದೇವರು

# ಪಿಡುಸರ್ರಿಂಯ ವೀರಶೈವಾಂಧ್ರ ಕವಿಗಳು

—ಸಿ. ಟಿ. ಯಂ. ಕೊಟ್ರಯ

ಮಧ್ಯಯುಗದಲ್ಲಿ ವೀರಶೈವ ಮತವು ಕರ್ನಾಟಕದಲ್ಲೆಲ್ಲಾ ಜನಾದರಣೀಯವಾಗಿದ್ದ ಪ್ರಕಾರ, ನೆರೆ ರಾಷ್ಟ್ರಗಳಾದ ಆಂಧ್ರ, ತಮಿಳುನಾಡು, ಮಹಾರಾಷ್ಟ್ರಗಳಲ್ಲಿಯೂ ಜನಾದರಣೀಯವಾಗಿತ್ತೆಂಬುದು ಸರ್ವ ವಿದಿತವಾದ ವಿಷಯವಷ್ಟೆ? ಅದರಲ್ಲೂ ಆಂಧ್ರದಲ್ಲಿ ಬಹು ಜನಾದರಣೀಯವಾಗಿತ್ತೆಂಬುವನ್ನು ಬೇರೆ ಹೇಳಬೇಕಾಗಿಲ್ಲ. ಅಲ್ಲಿಯ ತೆಲುಗು ಭಾಷೆಯಲ್ಲಿ ವಿಪುಲವಾಗಿ ದೊರಕಿರುವ ವೀರಶೈವ ಸಾಹಿತ್ಯ ಕೃತಿಗಳೇ ಇದಕ್ಕೆ ಮುಖ್ಯ ಸಾಕ್ಷ್ಯಾಧಾರಗಳು. ವೀರಶೈವ ಮತಕ್ಕೆ ಒಂದು ಸಂಸ್ಕರಣ ರೂಪ, ನೆಲೆ, ಸಾಹಿತ್ಯ ಮತ್ತು ಪ್ರಚಾರಗಳನ್ನು ಒದಗಿಸಿದ ಶರಣ, ಬಸವೇಶ್ವರ ಚರಿತ್ರೆಯು (ಬಸವ ಪುರಾಣವು) ಮೊದಲಿಗೆ ತೆಲುಗು ಭಾಷೆಯಲ್ಲಿ ಪಾಲ್ಕುರಿಕೆ ಸೋಮನಾಥನಿಂದ (ಸು. ಕ್ರಿ ಶ. ೧೨-೧೩ ಶತಮಾನ) ರಚಿತವಾಯಿತೆಂಬುದು ನಿರ್ವಿವಾದದ ಮಾತು. ಈತನು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲೂ ಸಹ ಗ್ರಂಥಗಳನ್ನು ರಚನೆ ಮಾಡುವಂಥವನಾಗಿದ್ದನು. ಆದರೂ ಬಸವ ಪುರಾಣವನ್ನು ಮೊದಲಿಗೆ ತೆಲುಗು ಭಾಷೆಯಲ್ಲಿ ಬರೆದು ಆಂಧ್ರದ ಜನತೆಗೆ ಅರ್ಪಿಸಿರುವುದನ್ನು ಗಣನೆಗೆ ತೆಗೆದುಕೊಂಡಲ್ಲಿ, ಮೇಲಿನ ವಿಷಯವು ದೃಢವಾಗುತ್ತದಲ್ಲವೇ? ಅಲ್ಲದೆ ಇದೇ ಬಸವ ಪುರಾಣವು ಪ್ರಥಮವಾಗಿ ಹಾಗೂ ಸಮಗ್ರವಾಗಿ ಕನ್ನಡದಲ್ಲಿ ಬರೆಯಲ್ಪಟ್ಟುದು ತದನಂತರ, ಎಂದರೆ ಕ್ರಿ ಶ. ೧೪ ನೇ ಶತಮಾನದಲ್ಲಿ, ಭೀಮ ಕವಿಯಿಂದ '........ಕ ಸೋಮನಾಥಂ/ರಸಮೊಸಲೆ ಮುನ್ನು ಪಿರ್ದುದನೆ ಕನ್ನಡಿಸಿ ಪೇಳ್ದೆಂ........(ಭೀಮಕವಿ ರಚಿಸಲ್ಪಟ್ಟಿತು ಹೀಗೆ ಆಂಧ್ರದಲ್ಲಿ ವೀರಶೈವ ಸಾಹಿತ್ಯದ ಕೃಷಿಯು, ಬಸವೇಶ್ವರ ಕಾಲದಿಂದಲೇ ಮಿತ ಪ್ರಮಾಣದಲ್ಲಿ ಪ್ರಾರಂಭವಾಗಿ, ತದನಂತರದ ಶತಮಾನಗಳ ವಿಪುಲವಾಗಿ ಜರುಗಿತು. ತತ್ಪರಿಣಾಮವಾಗಿ ತೆಲುಗು ಭಾಷೆಯಲ್ಲಿ ಅನೇಕ ವೀರಶೈವ ಗ್ರಂಥಗಳು ಉದಯಿಸಿದುವು. ಅವುಗಳ ವಿಷಯಗಳೋ ವೈವಿಧ್ಯಮಯ. ಅವುಗಳ ವಿವರಗಳನ್ನು ಸುಮಾರಾಗಿ ಈ ಕೆಳಗೆ ಕಾಣಿಸಿರುವಂತೆ ವಿಂಗಡಿಸಬಹುದು.

೧) ವೀರಶೈವ ಮತ/ಧರ್ಮ ಗ್ರಂಥಗಳು ೧೯, ೨) ವೀರಶೈವ ಪುರಾಣಗಳು ೧೦, ೩) ವೀರಶೈವ ಪ್ರಬಂಧಗಳು ೧೨, ೪) ವೀರಶೈವ ಮಹಾತ್ಮೆಗಳು ೭, ೫) ವೀರಶೈವ ಚರಿತ್ರೆಗಳು ೪, ೬) ವೀರಶೈವ ಕಥೆಗಳು ೬, ೭) ವೀರಶೈವ ದಂಡಕಗಳು ೪, ೮) ವೀರಶೈವ ಸ್ತುತಿಗಳು ೫, ೯) ವೀರಶೈ

ವಚನ ಗ್ರಂಥಗಳು ೩, ೧೦) ವೀರಶೈವ ಕೀರ್ತನೆಗಳು ೪, ೧೧) ವೀರಶೈವ ಯಕ್ಷಗಾನ ಪ್ರಸಂಗಗಳು ೯, ೧೨) ವೀರಶೈವ ಶತಕಗಳು ೨೭, ೧೩) ವೀರ ಶೈವ ಇತರೆ ಗ್ರಂಥಗಳು ೧೬.

ಹೀಗೆ ನೂರಕ್ಕೂ ಹೆಚ್ಚು ಗ್ರಂಥಗಳು ರಚಿತವಾದುವು. ಈ ಗ್ರಂಥಗಳಲ್ಲಿ ವಿಶದೀಕರಿಸಿರುವ ಹಾಗೂ ಪ್ರತಿಪಾದಿಸಿರುವ ವಿವಿಧ ಸಾಹಿತ್ಯ ವಿಷಯಗಳನ್ನು ಸೂಕ್ಷ್ಮ ವಾಗಿ ಪರಿಶೀಲಿಸುವಲ್ಲಿ, ಇವೆಲ್ಲವುಗಳ ಒಂದು ಉದ್ದೇಶವು ನಿರ್ದಿಷ್ಟವಾಗಿ ತಿಳಿದುಬರು ತ್ತದೆ. ಅದೇ ಗ್ರಂಥಕರ್ತರ ಮತ ಅಥವಾ ಧರ್ಮ, ಎಂದರೆ ವೀರಶೈವ ಧರ್ಮದ ಪ್ರಚಾರ ಕಾರ್ಯ. ಈ ರೀತಿಯಲ್ಲಿ ಗ್ರಂಥ ರಚನಾ ಕೃಷಿ ಮತ್ತಿತರ ಧಾರ್ಮಿಕ ಚಟುವಟಿಕೆಗಳಿಂದಾಗಿ ವೀರಶೈವ ಮತವು ಆಂಧ್ರದಲ್ಲಿ ಭದ್ರವಾಗಿ ನೆಲೆಗೊಂಡುದಲ್ಲದೆ, ಬೌದ್ಧ, ಜೈನ ಮತ್ತು ಕೆಲ ಶೈವ ಪಂಥಗಳ ಪ್ರಭಾವಗಳನ್ನು ಕುಂದಿಸುವಲ್ಲಿ ಯಶಸ್ವಿ ಯಾಯಿತು. ಕರ್ನಾಟಕದಲ್ಲಿ ಕಾಣಬರುವಂತೆ, ಆಂಧ್ರದಲ್ಲಿಯೂ ಸಹ ವೀರಶೈವ ಮತ ಪ್ರಚಾರಾರ್ಥವಾಗಿ ಜರುಗಿದ ಚಟುವಟಿಕೆಗಳಿಂದಾಗಿ, ಆಂಧ್ರ ವಾಙ್ಮಯದಲ್ಲಿ ಒಂದು ಅಧ್ಯಾಯವೇ ನಿರ್ಮಾಣವಾಯಿತೆಂದು ಹೇಳಿದರೆ ಅತಿಶಯೋಕ್ತಿಯಾಗ ಲಾರದು.

ಆಂಧ್ರದಲ್ಲಿ ಪ್ರಚಾರಕ್ಕೆ ಬಂದ ವೀರಶೈವ ವಾಙ್ಮಯದ ಉದಯವು ನನ್ನೆಚೋಡ (ಕ್ರಿ.ಶ. ೧೦ ನೇ ಶತಮಾನ), ಬಸವೇಶ್ವರನ ಸಮಕಾಲೀನನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯ (ಕ್ರಿ.ಶ. ೧೨ ನೇ ಶತಮಾನ), ನಂತರದ ಪಾಲ್ಕುರಿಕಿ ಸೋಮನಾಥ (ಕ್ರಿ.ಶ. ೧೨-೧೩ ನೇ ಶತಮಾನ) ಮುಂತಾದ ಕವಿವರ್ಯರಿಂದ ಆರಂಭವಾಯಿತೆಂದು ಹೇಳಬಹುದು. ಇವರುಗಳಲ್ಲಿ ಮುಖ್ಯವಾಗಿ, ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅನೇಕ ಗ್ರಂಥಗಳಿಗೆ ಕರ್ತೃವಾಗಿದ್ದನು. ಶಿವತತ್ವ ಸಾರಮು, ಲಿಂಗೋದ್ಭವ ದೇವ ಗದ್ಯ, ರುದ್ರ ಮಹಿಮೆ, ಅಮರೇಶ್ವರ ಅಷ್ಟಕಮು, ಭೀಮೇಶ್ವರ ಗದ್ಯಮು, ಸ್ತುತಿ ಶ್ಲೋಕ ಪಂಚಕಮು, ಪರ್ವತ ವರ್ಣನಮು, ಶ್ರೀಮುಖ ದರ್ಶನ ಗದ್ಯಮು, ಆದ್ಯ ಭಕ್ತಗಣ ಸಹಸ್ರ ನಾಮಮು ಎಂಬ ಗ್ರಂಥಗಳನ್ನು ರಚಿಸಿದ್ದುದಾಗಿ ತಿಳಿಯುತ್ತದೆ. ಇನ್ನು ಬಸವ ಪುರಾಣವನ್ನು ಮೊದಲಿಗೆ ರಚಿಸಿದ ಪಾಲ್ಕುರಿಕಿ ಸೋಮನಾಥನು 'ಇಡೀ ಶಿವಕವಿ ಸಮೂಹಕ್ಕೂ, ವೀರಶೈವ ಮತ ಸಿದ್ಧಾಂತಗಳಿಗೂ ಗುರುಪೀಠದಂತೆ' ಶೋಭಿಸುತ್ತಿರುವನು. ಈತನು ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ರಚಿಸಿದನು.

ಇವರುಗಳನಂತರ, ಆಂಧ್ರದಲ್ಲಿ ಹೇಳಿಕೊಳ್ಳಬಹುದಾದಂತ ವೀರಶೈವ ಕವಿ ಗಳೆಂದರೆ ಪಿಡುಪರ್ತಿಯ ಕವಿಗಳು. ಇವರು ಸಹ ಪಾಲ್ಕುರಿಕಿ ಸೋಮನಾಥನ ಶಿಷ್ಯ ಪರಂಪರೆಯವರಲ್ಲಿ ಬರುತ್ತಾರೆ. ಈ ವಂಶದ ಅನೇಕ ವೀರಶೈವ ಗ್ರಂಥಗಳ ರಚನೆಗೆ

ಕಾರಣರಾದರಲ್ಲದೇ, ತಮ್ಮ ಗುರುಪಾದ ಪಾಲ್ಕುರಿಕಿ ಸೋಮನಾಥನ ಬಸವ ಪುರಾಣ ಮತ್ತಿತರ ಕೃತಿಗಳನ್ನು ಬಹುವಾಗಿ ಪ್ರಚಾರದಲ್ಲಿ ತಂದರು, ಹಾಗೂ ಆ ಗುರುಪೀಠವನ್ನಲಂಕರಿಸಿದರು. ಇವರುಗಳಲ್ಲಿ ಪಿಡುಪರ್ತಿ ಬಸವನ, ಆತನ ಮಗ ಸೋಮನಾಥ, ಆತನ ಇನ್ನೊಬ್ಬ ಮಗನಾದ ಪಾಲನನ ಮಗನಾದ ಬಸವಪ್ಪ, ಇವರುಗಳೇ ಮುಖ್ಯರಾದವರು.

ಈ ಪಿಡುಪರ್ತಿ ಕವಿಗಳ ಪೂರ್ವಜರು, ಆಂಧ್ರದ ನಿಯೋಗಿ ಬ್ರಾಹ್ಮಣರಾಗಿದ್ದಿರಬೇಕು. ಇನ್ನು ಕೆಲವರು ತರ್ಕಿಸುವಂತೆ, ಆರಾಧ್ಯ ಬ್ರಾಹ್ಮಣರಾಗಿದ್ದಿರಲೂ ಸಾಕು, ತರುವಾಯ ಪಾಲ್ಕುರಿಕಿ ಸೋಮನಾಥನ ಪ್ರಭಾವಕ್ಕೊಳಗಾಗಿ, ಇವರು ವೀರಶೈವ ದೀಕ್ಷೆಯನ್ನು ಪಡೆದು, ವೀರಶೈವ ಜಂಗಮರಾದರು. ಹಾಗೂ ಪಾಲ್ಕುರಿಕಿ ಸೋಮನಾಥನನ್ನು ತಮ್ಮ ಗುರುವನ್ನಾಗಿ ಸ್ವೀಕರಿಸಿಕೊಂಡು, ತಮ್ಮ ಕಾವ್ಯಗಳಲ್ಲಿ ಆತನನ್ನು ಅಮಿತ ಗೌರವಪೂರ್ವಕವಾಗಿ ಸ್ಮರಿಸಿಕೊಂಡಿರುವುದು ತಿಳಿದುಬರುತ್ತದೆ. ಅಲ್ಲದೇ ಅದೇ ಪಾಲ್ಕುರಿಕಿ ಸೋಮನಾಥನ ಸಹಾಯದಿಂದ ಹಾಗೂ ಕಾಕತೀಯ ಅರಸನಾದ ಎರಡನೇ ಪ್ರತಾಪರುದ್ರನ ಮಂತ್ರಿಯಾದ ಇಂದುಟೂರಿ ಅನ್ನಯ್ಯನ ಮೂಲಕ, ಡೋಕಿಪರ್ರ ಎನ್ನುವ ಅಗ್ರಹಾರವನ್ನು, ಇವರ ಪೂರ್ವಜರಲ್ಲೊಬ್ಬನಾದ ಶಿವರಾತ್ರಿ ಕೊಪ್ಪನಾಥನು ಸ್ವೀಕರಿಸಿದ್ದನು, ಈ ವಿಷಯವು ಪಿಡುಪರ್ತಿ ಸೋಮನಾಥನ ಪದ್ಯಬಸವ ಪುರಾಣದಿಂದ ತಿಳಿದುಬರುತ್ತದೆ.

ಇದೇ ಪದ್ಯ ಬಸವ ಪುರಾಣ ಗ್ರಂಥದಲ್ಲಿ ಕಾಣಬರುವ ಇವರ ವಂಶದ ಇತರ ವಿವರಗಳನ್ನು ಕೆಳಗಿನಂತೆ ತೋರಿಸಬಹುದು,



ಈ ಪಿಡುಪರ್ತಿ ಕವಿಗಳು, ಈಗಿನ ಗುಂಟೂರು, ವಿಜಯವಾಡ ಪ್ರಾಂತದವರಾಗಿದ್ದಿರಬೇಕು. ಹೇಗೆಂದರೆ, ಈ ವಂಶೀಯರಾದ ಜಂಗಮರು ಗುಂಟೂರು ಜಿಲ್ಲೆಯ ಕಡೆಗಾಲ, ಗರುಡಾಚಲಪಾಲೆಂ ಮುಂತಾದ ಗ್ರಾಮಗಳಲ್ಲಿ ಈಗಲೂ ಕಾಣಬರುತ್ತಿದ್ದಾರೆ. ಅಲ್ಲದೆ ಮೇಲೆ ತಿಳಿಸಿದ ಡೋಕಿಪರ್ರ ಎನ್ನುವ ಗ್ರಾಮಗಳೆರಡು ಕೃಷ್ಣಾ ಜಿಲ್ಲೆಯ ಗುಡಿವಾಡ ತಾಲೂಕು ಹಾಗೂ ಗುಂಟೂರು ಜಿಲ್ಲೆಯ ಸತ್ತೆನಪಲ್ಲಿ ತಾಲೂಕುಗಳಲ್ಲಿವೆ. ಅಂತೆಯೇ ಪಿಡುಪರ್ರ ಎನ್ನುವ ಗ್ರಾಮವು ಗುಂಟೂರು ಜಿಲ್ಲೆಯ ತೆನಾಲಿ ತಾಲೂಕಿನಲ್ಲಿದೆ. ಅವರ ಗ್ರಾಮವು ಮೇಲಿನ ಯಾವುದಾದರೊಂದಾಗಿದ್ದಿರಬಹುದಾದರೂ ಅವರು ಗುಂಟೂರು-ವಿಜಯವಾಡ ಪ್ರಾಂತದವರಾಗಿದ್ದಿರಬೇಕೆಂಬುವನ್ನು ನಿರ್ದಾರವಾಗಿ ಹೇಳಬಹುದಲ್ಲವೇ?

ಈ ಪಿಡುಪರ್ತಿ ಕವಿಗಳು ಜೀವಿಸಿದ್ದ ಕಾಲವನ್ನು ನಿರ್ಣಯಿಸುವಾಗಲೂ ಸಹ ನಾವು ಪಿಡುಪರ್ತಿ ಸೋಮನಾಥನ ಮುಖ್ಯ ಕೃತಿಯಾದ ಪದ್ಯಬಸವ ಪುರಾಣವನ್ನೇ ಆಧಾರವಾಗಿಟ್ಟುಕೊಳ್ಳಬೇಕಾಗುತ್ತದೆ. ಮೇಲೆ ಕೊಟ್ಟಿರುವ ವಂಶಾವಳಿಯಲ್ಲಿ ಕಾಣಬರುವ ಶಿವರಾತ್ರಿ ಕೊಪ್ಪನಾಥನು, ಆಗಲೇ ಹೇಳಿರುವಂತೆ, ಪಾಲ್ಕುರಿಕೆಯ ಸೋಮನಾಥನ ಸಮಕಾಲೀನನೆಂದು ಖಚಿತವಾಯಿತು. ಎಂದರೆ ಕ್ರಿ.ಶ. ೧೨–೧೩ ನೇ ಶತಮಾನದವನೆಂದಾಯಿತು. ಈತನು ಪ್ರತಾಪರುದ್ರನಿಂದ ಪಡೆದಂಥ ಡೋಕಿಪರ್ರ (ಡೋಕಿಪುರ) ಅಗ್ರಹಾರವು ಕಾಲಾಂತರದಲ್ಲಿ ಕೈತಪ್ಪಿಹೋಗಿರಲಾಗಿ, ಆತನ ಮೊಮ್ಮಗನಾದ ಪೆನಸೋಮನ (ಪೆದ ಸೋಮನ), ವಿಜಯನಗರದರಸ ಪ್ರೌಢದೇವರಾಯನ (ಕ್ರಿ.ಶ. ೧೪೨೨–೧೪೪೬) ಕಾಲದಲ್ಲಿ ಈ ಅಗ್ರಹಾರವನ್ನು ಪುನಃ ಪಡೆದನು. ಎಂದರೆ ಈ ಪೆನಸೋಮನು ಕ್ರಿ.ಶ. ೧೫ ನೇ ಶತಮಾನದ ಪೂರ್ವದವನೆಂದಾಯಿತು. ಈ ಪೆನಸೋಮನನ ಅನಂತರದವರೆ, ವೀರ ಶೈವಾಂಧ್ರ ಸಾಹಿತ್ಯಕ್ಕೆ ಗಣನೀಯವಾಗಿ ಕೃತಿಗಳನ್ನು ನೀಡಿದರು. ಈತನ ಮೊಮ್ಮಗನಾದ ಪಿಡುಪರ್ತಿ ಬಸವನ; ಆತನ ಮೊಮ್ಮಗ ಪಿಡುಪರ್ತಿ ಸೋಮನಾಥ ಮತ್ತು ಈ ಸೋಮನಾಥನ ತಮ್ಮನ ಮಗನಾದ ಪಿಡುಪರ್ತಿ ಬಸವಪ್ಪ, ಇವರೇ ಈ ವಂಶದ ಮುಖ್ಯ ವೀರಶೈವಾಂಧ್ರ ಕವಿಗಳು. ವಿಜಯನಗರದ ಪ್ರೌಢದೇವರಾಯನ ಸಮಕಾಲೀನನಾದ ಪೆನ ಸೋಮನಿಂದ ಆರಂಭಿಸಿ, ಪಿಡುಪರ್ತಿ ಬಸವಪ್ಪನವರೆಗೆ ನಾಲ್ಕು ತಲಾಂತರಗಳಾಗುವುದರಿಂದ, ಇವರೆಲ್ಲರೂ ಕ್ರಿ.ಶ. ೧೫ ಮತ್ತು ೧೬ ನೇ ಶತಮಾನಗಳಲ್ಲಿ ಜೀವಿಸಿದ್ದರೆಂದು ತರ್ಕಿಸಬಹುದು. ಈ ವಾದಸರಣಿಯನ್ನನುಸರಿಸಿ ಅವರ ಕಾಲವನ್ನು ಈ ಕೆಳಗಿನಂತೆ ಅಂದಾಜು ಮಾಡಲಾಗಿದೆ.

೧) ಪಿಡುಪರ್ತಿ ಬಸವನ ಕ್ರಿ.ಶ. ೧೪೭೬–೧೫೦೦. ೨) ಪಿಡುಪರ್ತಿ ಸೋಮನಾಥ ಕ್ರಿ.ಶ. ೧೫೦೦-೧೫೨೫. ೩) ಪಿಡುಪರ್ತಿ ಬಸವಪ್ಪ ಕ್ರಿ.ಶ. ೧೫೨೫-೧೫೫೦.

(ಮುಂದುವರಿಯುತ್ತದೆ)

# ಕಣ್ಮರೆಯಾದ ಕಾದಂಬರಿಕಾರ
# ಕೊರಟಿ ಶ್ರೀನಿವಾಸರಾವ್

—ಜಯಸಿಂಹ

ಕನ್ನಡದ ಪ್ರಖ್ಯಾತ ಕಾದಂರಿಕಾರರಾದ ಕೊರಟಿ ಶ್ರೀನಿವಾಸರಾವ್ ಹಠಾತ್ತನೆ ನಿಧನರಾದ ವಾರ್ತೆ ಕನ್ನಡ ಜನತೆಗೆ ಅನಿರೀಕ್ಷಿತ. ಹೌದೇ, ನಿಜವೇ, ಅನೇಕರಿಗೆ ಆಶ್ಚರ್ಯ. ಕುಸ್ತಿಯ ವಸ್ತಾದರಂತೆ ಗಟ್ಟಿಮುಟ್ಟಾಗಿದ್ದ ಕೊರಟಿ ಇಷ್ಟುಬೇಗ ಎಲ್ಲರನ್ನೂ ಬಿಟ್ಟು ಹೊರಟು ಹೋಗುವರೆಂದು ಯಾರೂ ತಿಳಿದಿರಲಿಲ್ಲ. ಆದರೆ ಸಾವು ಹೇಳಿ ಕೇಳಿ ಬರುವುದಿಲ್ಲ. ಸುಳಿವು ಸಿೀಡದ ಹಾಗೆ ವಂಚಿಸುವುದು ಸಾವಿನ ಆಟ.

ಕೊರಟಿ ಶ್ರೀನಿವಾಸರಾಯರ ನಿಧನದಿಂದ ಕನ್ನಡ ಸಾರಸ್ವತ ಪ್ರಪಂಚ ದುಃಖತಪ್ತವಾಗಿರುವುದಷ್ಟೆ ಅಲ್ಲ, ಒಂದು ತಲೆಮಾರಿನ ಮೌಲ್ಯಗಳನ್ನು ಹೊತ್ತಿದ್ದ ಸ್ತಂಭವೊಂದು ಉರುಳಿ ಬಿದ್ದಂತಾಗಿದೆ. ಕೊರಟಿಯವರು ಸಾತ್ವಿಕತೆಯ ಪ್ರತಿ ಮೂರ್ತಿಯಾಗಿದ್ದರು, ಸಹೃದಯತೆ, ತಾಳ್ಮೆ, ಉಪಕಾರ ಬುದ್ಧಿ, ಹಿಡಿದ ಕೆಲಸವನ್ನು ಬಿಡದೆ ನಡೆಸುವ ಸಧೃಡ ಸಂಕಲ್ಪ ಶಕ್ತಿ ಅವರ ಸ್ವಭಾವದಲ್ಲಿ ಒಂದಾಗಿ ಬೆರೆತು ಹೋಗಿದ್ದವು.

ಕೊರಟಿ ಬರೆದ ಪುಸ್ತಕಗಳಲ್ಲಿ ಐತಿಹಾಸಿಕ ಕಾದಂಬರಿಗಳೇ ಹೆಚ್ಚು. ವಿಜಯನಗರ ಸಾಮ್ರಾಜ್ಯವನ್ನು ಕುರಿತು ಅವರು ರಚಿಸಿದ ಸುಮಾರು ಇಪ್ಪತ್ತು ಕಾದಂಬರಿಗಳು ಕನ್ನಡಿಗರ ಹೃದಯದಲ್ಲಿ ಅಜರಾಮರ. ಐ ತಿ ಹಾ ಸಿ ಕ ಕಾದಂಬರಿಗಳನ್ನು ವಸ್ತುನಿಷ್ಠವಾಗಿ ಸರಳ ಸುಂದರ ಶೈಲಿಯಲ್ಲಿ ಕಣ್ಣಿಗೆ ಹೆಣೆಯುವುದರಲ್ಲಿ ಕೊರಟಿ ಸಿದ್ಧಹಸ್ತರು. ಇತಿಹಾಸದ ಒಳಪದರಗಳನ್ನು ಹೊಕ್ಕು, ತಮ್ಮ ಕಲ್ಪನೆಯ ಒಳಗಣ್ಣಿನಿಂದ ಘಟನೆಗಳ ತುತ್ತ ತುದಿ ತಲುಪಿ ಪ್ರಾಮಾಣಿಕತೆಯ ಬೆಳಕಿನಲ್ಲಿ ನವುರಾಗಿ ಚಿತ್ರಿಸುವುದು ಅವರಿಗೆ ವಶವಾದ ಕಲೆ. ಕಾದಂಬರಿಯೇ ಆಗಲಿ ಸಣ್ಣ ಕತೆಯೇ ಆಗಲಿ ಸರಳವಾಗಿ ತಮ್ಮನ್ನು ತಾವು ಓದುಗರಿಗೆ ತೆರೆದುಕೊಳ್ಳುವ "ಕೊರಟಿ ಸ್ಪರ್ಶ" ಹೊಂದಿರುತ್ತದೆ.

ಕೊರಟಿ ಬರೆದ ಎರಡು ಕಾ ದ ಂ ಬ ರಿ ಗ ಳು "ಮಿಸ್ ಲೀಲಾವತಿ" ಮತ್ತು "ಗೃಹಿಣಿ" ಚಲನಚಿತ್ರಗಳಾಗಿ ಜನಪ್ರಿಯವಾಗಿದ್ದವು.

**ಪತ್ರಿಕೋದ್ಯಮಿ :** ಕಾದಂಬರಿಕಾರ ಕೊರಟಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದ್ದು ಪತ್ರಿಕೋದ್ಯಮದಿಂದ ‹‹ಸಂಯುಕ್ತ ಕರ್ನಾಟಕ” ದಿನ ಪತ್ರಿಕೆಯ ಉಪ-ಸಂಪಾದಕರಾಗಿ ಅವರು ಬರವಣಿಗೆಗೆ ಮೊದಲು ಮಾಡಿದರು.

ಪತ್ರಿಕೋದ್ಯಮಿಯಾಗಿ ಕೊರಟಿ ಕಲಿತ ಪಾಠ ಅವರ ಬದುಕಿಗೆ ಹೊಸದಿಕ್ಕು ತೋರಿತು. ಕೊರಟಿ ಕನ್ನಡ ಅಧ್ಯಾಪಕರಾಗಿ ಬೆಂಗಳೂರಿನ ಆಚಾರ್ಯ ಪಾಠ ಶಾಲಾ ಕಾಲೇಜನ್ನು ಸೇರಿದರು. ಅಲ್ಲಿ ನಿಷ್ಠೆಯಿಂದ ದುಡಿದರು. ಕನ್ನಡ ವಿಭಾಗದ ಮುಖ್ಯಸ್ಥರಾಗಿ ಮುಂದುವರಿದು ನಂತರ ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿದರು.

ಕೊರಟಿ ಪಾಠ ಮಾಡುತ್ತಿದ್ದ ಮಾದರಿಯೇ ಒಂದು ಸೊಗಸು. ಸ್ಫಟಿಕದ ಶಲಾಕದ ಹಾಗೆ ಅವರ ಮಾತು ಸುಸ್ಪಷ್ಟ. ಎಷ್ಟು ದೂರಕ್ಕಾದರೂ ತಲಪುವ ಸದೃಢ ವಾಣಿ. ಕ್ಲಿಷ್ಟ ಪದಗಳ ಬಳಕೆ ಕಮ್ಮಿ. ಸರಳತೆಗೆ ಹೆಚ್ಚು ಒತ್ತು. ಸುತ್ತ ಮುತ್ತ ನಡೆಯುವ ನಿತ್ಯ ಘಟನೆಗಳ ನಿದರ್ಶನದಿಂದ ಪಾಠಕ್ಕೆ ಹೆಚ್ಚು ಸಹಜತೆ. ಹಾಗಾಗಿ ಕೊರಟಿ ಪಾಠ ವಿದ್ಯಾರ್ಥಿಗಳಿಗೆ ಹಬ್ಬದೂಟ.

**ದಾಸ ಸಾಹಿತ್ಯ ಸೇವೆ :** ಸಂಪ್ರದಾಯ ಬದ್ಧ ಮನೆತನದಲ್ಲಿ ಬೆಳೆದ ಕೊರಟಿಯವರಿಗೆ ತಮ್ಮ ಜೀವನದ ಕೊನೆಯ ಹಂತದಲ್ಲಿ ಹರಿದಾಸ ಸಾಹಿತ್ಯದ ಬಗ್ಗೆ ಅಪಾರ ಆಸಕ್ತಿ ಮೂಡಿತು. ಕೊರಟಿ ಹರಿದಾಸರ ಕೀರ್ತನೆಗಳನ್ನು ಆಳವಾಗಿ ಅಭ್ಯಾಸ ಮಾಡಿದರು. ಪಂಡಿತ ಶ್ರೇಷ್ಠರಾದ ಶ್ರೀ ಗೌಡಗೆರೆ ಗೋಪಾಲ ಕೃಷ್ಣಾಚಾರ್ಯರ ಸಹಕಾರದಿಂದ ಸ್ಫೂರ್ತಿ ಪಡೆದು ಧಾರ್ಮಿಕ ಗ್ರಂಥ ರಚನೆಗೆ ಪ್ರಾರಂಭಿಸಿದರು. ಮೊದಲು ಅವರು ಬರೆದ ‹‹ ಶ್ರೀ ಮಧ್ವಾಚಾರ್ಯರು ’’ ಕ್ಷಿಪ್ರ ಸಮಯದಲ್ಲೇ ಎರಡು ಮುದ್ರಣ ಕಂಡಿತು. ಆ ನಂತರ ಕ್ರಮವಾಗಿ ‹‹ಶ್ರೀ ರಾಘವೇಂದ್ರ ಸ್ವಾಮಿಗಳು, ವ್ಯಾಸರಾಯರು ಜಯತೀರ್ಥರು, ವಾದಿರಾಜರು’’ ಮುಂತಾದ ಬೃಹತ್ ಗ್ರಂಥಗಳನ್ನು ಶ್ರದ್ಧೆಯಿಂದ ಬರೆದು ಕನ್ನಡಿಗರಿಗೆ ಒಪ್ಪಿಸಿದರು. ತಿರುಪತಿ ಕ್ಷೇತ್ರವನ್ನು ಕುರಿತು ಅವರು ರಚಿಸಿದ ಕಿರು ಪುಸ್ತಕ ಅಪಾರ ಜನ ಮನ್ನಣೆಗಳಿಸಿತು. ತಿರುಪತಿ ತಿರುಮಲ ದೇವಸ್ಥಾನದವರು ಅದರ ಪ್ರಕಟಣೆಯ, ಮರು ಪ್ರಕಟನೆಯ ಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡರು. ಅದು ಮರು ಮುದ್ರಣಗಳನ್ನು ಕಂಡಿತು. ಇದಲ್ಲದೆ ಹರಿದಾಸ ಸಾಹಿತ್ಯ ಸೇವೆಗಾಗಿ ದುಡಿದ ‹ ಪಾವಂಜಿ ಗುರುರಾಯರು, ಗೋರೆಬಾಳು ಹನುಮಂತ ರಾಯರು, ಸುಭೋದರಾಮ ರಾಯರು ಮುಂತಾದವರನ್ನು ಕುರಿತು ಕಿರು ಪುಸ್ತಕಗಳನ್ನು ಬರೆದರು. ಹರಿದಾಸ ಸಾಹಿತ್ಯ ಪರಂಪರೆಯನ್ನು ತಮ್ಮ ಸರಳ ಸುಂದರ ಶೈಲಿಯಲ್ಲಿ ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟರು.

ಕೊರಟಿಯವರು ಬರೆದ ಇನ್ನೂ ಹಲವಾರು ಗ್ರಂಥಗಳು ಇನ್ನೂ ಪ್ರಕಟನೆಗಾಗಿ ಕಾದು ಕುಳಿತಿವೆ. "ಶ್ರೀಪಾದರಾಜರು ಕುವೆಂಪು ವಿಜಯದಾಸರು" ಮುಂತಾದ ಪುಸ್ತಕಗಳು ಕನ್ನಡಿಗರ ಕೈಸೇರಬೇಕಾಗಿದೆ. ಆದರೆ ಅಷ್ಟರಲ್ಲೇ ಕೊರಟಿ ಕಣ್ಮರೆಯಾದರು. ಕನ್ನಡ ಸಾಹಿತ್ಯ ಪರಿಷತ್ತು ಈ ಪುಸ್ತಕಗಳ ಪ್ರಕಟನೆಗಾಗಿ ಮುಂದೆ ಬರಬೇಕಾಗಿದೆ. ಕನ್ನಡ ಸರ್ಕಾರ ತನ್ನ ಸಹಾಯ ಹಸ್ತ ಚಾಚಬೇಕಾಗಿದೆ.

ಕೊರಟಿಯವರ ಸಾಮಾಜಿಕ ಪಾತ್ರವು ಉಲ್ಲೇಖಾರ್ಹ. ವಿಶ್ವ ಹಿಂದೂ ಪರಿಷತ್ತಿನ ನಗರಾಧ್ಯಕ್ಷರಾಗಿದ್ದ ಅವರಿಗೆ ರಾಜ್ಯದ ಹಲವಾರು ಸಂಘ ಸಂಸ್ಥೆಗಳೊಂದಿಗೆ ನಿಕಟ ಪರಿಚಯವಿತ್ತು, ಸಾಮಾಜಿಕ ಅನ್ಯಾಯವಾದಾಗ ಸಿಡಿದೇಳುವ ಅವರ ಸ್ವಭಾವ ಅನೇಕರನ್ನು ಆಕರ್ಷಿಸಿತ್ತು. ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶ ತೀರ್ಥರು ಮತ್ತು ಇನ್ನೂ ಹಲವಾರು ಮಠಾಧಿಪತಿಗಳು ಕೊರಟಿ ಅವರನ್ನು ಗೌರವಿಸಿ ಆಶೀರ್ವದಿಸಿದ್ದರು. ಅನೇಕ ವಿದ್ವಾಂಸರು ಅವರ ಗುಣಗಾನ ಮಾಡಿದ್ದರು.

ಕೊರಟಿ ಶ್ರೀನಿವಾಸರಾಯರಿಂದ ಕನ್ನಡಕ್ಕೆ ಇನ್ನೂ ಹೆಚ್ಚಿನ ಸೇವೆ ಸಲ್ಲಬೇಕಾದ ಸಮಯದಲ್ಲೇ ಅವರು ನಮ್ಮಿಂದ ಅಗಲಿ ಹೋದರು. ಮಾಡಬಹುದಾದ್ದನ್ನು ಪ್ರಾಮಾಣಿಕವಾಗಿ ಸದ್ದಿಲ್ಲದೆ ಮಾಡಿ ಕಣ್ಮರೆಯಾದರು. ಕೊರಟಿಯವರ ನೆನಪು ಮಾಸದಂತೆ ಹಸಿರಾಗಿಸಿಕೊಳ್ಳುವುದು ಕನ್ನಡಿಗರ, ಕರ್ನಾಟಕ ಸರ್ಕಾರದ ಕರ್ತವ್ಯವಾಗಿದೆ.

---

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡಲಯ್ಯಾ, ಬಡವನು !
ಎನ್ನ ಕಾಲೇ ಕಂಭ, ದೇಹವೇ ದೇಗುಲ,
ಶಿರವೇ ಹೊನ್ನ ಕಲಶವಯ್ಯಾ !
ಕೂಡಲಸಂಗಮದೇವ ಕೇಳಯ್ಯಾ
ಸ್ಥಾವರಕ್ಕಳಿವುಂಟು ಜಂಗಮಕ್ಕಿಲ್ಲ.

ಏನನೋದಿ, ಏನ ಕೇಳಿ, ಏನ ಮಾಡಿಯೂ ಫಲವೇನು,
ನಿನ್ನವರೊಲಿಯದನ್ನಕ್ಕ, ಶಿವಶಿವ, ಮಹಾದೇವಾ ?
ಬಾಳಿಲ್ಲದವಳ ಓಲೆಯಂತಾಯಿತ್ತೆನಗೆ ಕೂಡಲಸಂಗಮದೇವಾ.

---

(7 ನೇ ಪುಟದಿಂದ ಸಂಪಾದಕೀಯ)

ದೊಡ್ಡವಾಗುವವರೆಗೆ ಬಿಟ್ಟುಕೊಂಡು ಬಂದುದೇ ಮಹಾಪರಾಧವಾಗಿಹೋಗಿದೆ. ಇದಕ್ಕೆಲ್ಲ ರಾಷ್ಟ್ರದಲ್ಲಿ ಮುತ್ಸದ್ದಿಗಳ ಅಭಾವವೋ, ಸುಭದ್ರ ಕೇಂದ್ರ ಸರಕಾರವಿಲ್ಲದುದೋ ಕಾರಣವಾಗಿರಬೇಕು ಎನ್ನಿಸುತ್ತದೆ. ಬುದ್ಧಿ ಜೀವಿಗಳಿಗೆ ದಿನೇದಿನೇ ಭಾರತದ ಆಂತರಿಕ ಪರಿಸ್ಥಿತಿ ಸ್ಫೋಟಗೊಳ್ಳುವತ್ತ ಸಾಗಿರುವುದು ದುರದೃಷ್ಟಕರವೆನಿಸಿದೆ. ವ್ಯವಸಾಯವನ್ನು, ಗ್ರಾಮೀಣ ಉಪ ಕಸಬುಗಳನ್ನು ನೆಚ್ಚಿ ಜೀವಿಸುವ ಸುಮಾರು ಶೇಕಡಾ 75-80 ರಷ್ಟು ಜನಜೀವನ ದಿನೇದಿನೇ ದುರ್ಭರಗೊಳ್ಳುತ್ತಿದೆ. ಪಟ್ಟಣಗಳು ಅನೂಹ್ಯವಾಗಿ ಬೆಳೆಯುತ್ತ ನಡೆದಿವೆ ಅಲ್ಲಿ ಬುದ್ಧಿವಂತರೆಲ್ಲ ಸಂಘಟಿತರಾಗಿ ತಮ್ಮ ತಮ್ಮ ಯೋಗಕ್ಷೇಮಕ್ಕೆ ಸರಕಾರದೊಡನೆ ಸೆಣಸಿ ಅನುಕೂಲ ಪಡೆಯುತ್ತ ನಡೆದಿದ್ದಾರೆ. ಅಸಂಘಟಿತ ಗ್ರಾಮೀಣ ಪ್ರದೇಶಗಳು ದುರ್ಬಲಗೊಳ್ಳುತ್ತ ಶ್ರಮಜೀವಿಗಳು ನಿರ್ನಾಮವಾಗುತ್ತ ನಡೆದಿದ್ದಾರೆ. ಇದಕ್ಕೆಲ್ಲ ಅಸಮರ್ಪಕ ಆರ್ಥಿಕ ಹಂಚಿಕೆ ಕಾರಣವಾಗಿದೆ. ಈ ಸಮಸ್ಯೆ ಎಷ್ಟು ಜಟಿಲವಾಗಿದೆಯೆಂದರೆ ಯಾರೂ ಸುಧಾರಿಸಲು ಶಕ್ಯವಿಲ್ಲದಷ್ಟು ಹದಗೆಟ್ಟುಹೋಗಿದೆಯೆನಿಸುತ್ತದೆ. ಈ ಕಾರಣಕ್ಕಾಗಿ ಆಂಧ್ರ, ಕರ್ನಾಟಕ, ತಮಿಳು ನಾಡುಗಳಲ್ಲಿ ಕೇಂದ್ರ ಸರಕಾರದಲ್ಲಿರುವ ರಾಜಕೀಯ ಪಕ್ಷದ ಧೋರಣೆಯನ್ನು ಬದಿಗೊತ್ತಿ ಬೇರೆಬೇರೆ ಪಕ್ಷಗಳ ಮೊರೆಹೊಕ್ಕು ತಮ್ಮ ತಮ್ಮ ಉತ್ತಮ ಭವಿಷ್ಯಕ್ಕಾಗಿ ಹೆಣಗುತ್ತಿದ್ದಾರೆ. ಆದರೆ ಆಳವಾಗಿ ಬೇರುಬಿಟ್ಟಿರುವ ಅನೇಕ ವಿಷವೃಕ್ಷಗಳನ್ನು ಸಮೂಲ ನಾಶಮಾಡಿ ಆರ್ಥಿಕ ಸಮತೋಲನಗೊಳಿಸುವುದು ಉತ್ತಮ ಆಡಳಿತ ತರುವುದೇನೂ ಸುಲಭವಾಗುತ್ತಿಲ್ಲ. ಹೆಜ್ಜೆಹೆಜ್ಜೆಗೂ ಭೂತಾಕಾರವಾಗಿ ಬೆಳೆದ ಅನೇಕ ಪ್ರತಿರೋಧಗಳನ್ನು ಹತ್ತಿಕ್ಕುವುದು ಕಷ್ಟಸಾಧ್ಯವಾಗಿದೆ. ಇಂಥ ಹಲವು ಹನ್ನೊಂದು

ಸಮಸ್ಯೆಗಳ ಸುಳಿಯಲ್ಲಿ ಸಿಕ್ಕ ಭಾರತದ ಆಂತರಿಕ ಪರಿಸ್ಥಿತಿ ದೇಶವನ್ನು ತೀರಾ ದುಬ
ಗೊಳಿಸಿಬಿಟ್ಟಿದೆ. ಜನಜೀವನ ತತ್ತರಿಸಿದೆ, ಆದ್ದರಿಂದಲೇ ಬುದ್ಧಿಜೀವಿಗಳು ರಾಷ್ಟ್ರ
ಉತ್ತಮ ಭವಿಷ್ಯ ಹೇಗೆ? ಎಂದು ತಲೆತುರಿಸಿಕೊಳ್ಳತೊಡಗಿದ್ದಾರೆ. ಈಗತ
ಕರ್ನಾಟಕದಲ್ಲಿ ಗರಿಗಟ್ಟಿಕೊಳ್ಳುತ್ತಿರುವ ಜನತಾಪಕ್ಷ ಮತ್ತು ಆಂಧ್ರದ ತೆಲುಗುದೇ
ಪಕ್ಷಗಳು ಧೈರ್ಯವಾಗಿ ಉತ್ತಮ ಆಡಳಿತವನ್ನು ಕೊಟ್ಟಾವೆ? ಧೃತಿಗೆಟ್ಟ ಜನತೆ
ಆಶೋತ್ತರಗಳನ್ನು ಈಡೇರಿಸಿಯಾವೆ? ಎಂದು ಸಮಗ್ರ ಭಾರತದ ಜನತೆ ಕ
ಬಿಟ್ಟು ನೋಡುತ್ತ ಕುಳಿತಿದ್ದಾರೆ.

---

(10 ನೇ ಪುಟದಿಂದ ಕ್ಷೇತ್ರವಾ

ಜೀವನದುದ್ದಕ್ಕೂ ಹೋರಾಟ ಮಾಡಿದರು. ಅವರು ಹೋರಾಡಿದ್ದು ಮೊದಲು ತ
ಅಂತರಂಗದ ವಿರುದ್ಧ. ಅನಂತರ ಲೋಕ ಜೀವನದಲ್ಲಿ ಕಂಡ ಅನ್ಯಾಯಗಳ ವಿರು
ಆತ್ಮ ವಿಶ್ವಾಸದ ರತ್ನಗಣಿ ಬಸವಣ್ಣನವರು. ಆ ಮೂಲಧನ ಅವರ ಬಹುಮು
ಜೀವನಕ್ಕೆ ವಿನಿಯೋಗವಾದುದು ಲೋಕವಿದಿತ. ಕಾಯಕತತ್ವ, ದಾಸೋಹಸೇ
ಅಸ್ಪೃಶ್ಯೋದ್ಧಾರ ಅವರು ಮಾಡಿದ ಮಹತ್ತರ ಸೇವೆಗಳು. ಸ್ತ್ರೀ ಸಮಾ
ಉದ್ಧಾರವಂತೂ ಎಂದೆಂದಿಗೂ, ಸ್ತ್ರೀ ಸಮಾಜ ಸ್ಮರಣೆಯಲ್ಲಿಟ್ಟುಕೊಳ್ಳಬಹುದಾ
ಅಮೂಲ್ಯ ಸೇವೆ. ಬಸವಣ್ಣನವರು ರೂಪಿಸಿದ್ದು ವರ್ಗರಹಿತ, ವರ್ಣರಹಿತ ಸಮಾ
ಜಾತಿಭೇದ, ಲಿಂಗಭೇದ, ಭಾಷಾಭೇದಗಳಿಂದ ಅತೀತವಾದದ್ದು ಅದು. ಮೇಲಾ
ಕನ್ನಡ ಭಾಷೆಗೆ ಶ್ರೀಮಂತಿಕೆಯನ್ನು ತಂದುಕೊಟ್ಟ ವಿಶ್ವಮಾನ್ಯ ಮಾಡಿದ ಯಶ
ಅವರ ಸಾಧನೆಯ ಮಹತ್ವದ ಘಟ್ಟ. ಬಸವಣ್ಣನವರು ಎಲ್ಲವನ್ನು ಮಾಡಿದ
ಆದರೆಂದಿಗೂ 'ಮಾಡಿದೆನೆಂಬ' ಅಹಂಕಾರಕ್ಕೆ ಒಳಗಾಗದೆ, 'ಎನಗಿಂತ ಕಿರಿಯರಿ
ನೆಂದೇ ಬಾಳಿದರು. ಇಂದು ನಮ್ಮ ಜನನಾಯಕರು ರಾಷ್ಟ್ರಕ್ಕೆ ಬಹು ದೊಡ್ಡ ಕೊಡ
ಯನ್ನು ಕೊಟ್ಟಿದ್ದಾರೆ. ಒಂದು ಜಾತೀಯತೆ, ಮತ್ತೊಂದು ಭ್ರಷ್ಟಾಚಾ
ಸ್ವಾತಂತ್ರ್ಯ ಬಂದಮೇಲಂತೂ ಜಾತ್ಯತೀತ ರಾಷ್ಟ್ರ ನಿರ್ಮಾಣದ ಮಾತು ಎಲ್ಲೆಲ್ಲ
ಎಲ್ಲರಿಂದಲೂ ಕೇಳಿಬರುತ್ತಿದೆ. ಆದರೆ ಮಾತಿನಂತೆ, ಮನವಿಲ್ಲ, ಕೃತಿಯಿಲ್ಲ. ಜಾ
ಬಿಡದ ಜಾತ್ಯತೀತ ವರ್ಗ ನಿರ್ಮಾಣಮಾಡುತ್ತಿರುವ ಸೇವಾ ಜೀವಗಳು ತಲೆ ಎ
ತ್ತಿರುವುದಂತೂ ವಿಷಾದಕರ. ಜಾತಿಯ ಹೆಸರಿನಲ್ಲಿಯೂ ಎಲ್ಲದರ, ಎಲ್ಲರ ಅ
ವೃದ್ಧಿಗೆ ಒಳದಾರಿ ನಿರ್ಮಿಸುತ್ತ, ಬಹಿರಂಗವಾಗಿ, ವೇದಿಕೆಗಳ ಮೇಲಿಂದ 'ಜಾ
ಬಿಡಬೇಕು' ಎಂಬ ಅಸ್ವಾಯುಕರವಾದ ಬೆಲ್ಲದಂಥ ಮಾತುಗಳನ್ನಾಡುತ್ತಿರುವ ನಾ
ಕರು, ಸುಧಾರಕರು, ಚಿಂತಕರು, ತತ್ವದರ್ಶಿಗಳು ಬಸವ ತತ್ವಗಳನ್ನರಿತು ನಡೆ
ರಾಷ್ಟ್ರಕ್ಕೆ ಶುಭವಾಗುವುದರಲ್ಲಿ ಸಂದೇಹವಿಲ್ಲವೆಂದರು. ಸಮಾರಂಭದಲ್ಲಿ ಅನೇಕ ಗ
ಗುರು ಚರಮೂರ್ತಿಗಳು ಅನೇಕ ವಿದ್ವಾಂಸರು ಬಸವಣ್ಣನವರ ಜೀವನದ ಬೇರೆಬೇ
ಮುಖಗಳ ಪರಿಚಯ ಮಾಡಿಕೊಟ್ಟರು.

LICENCED TO POST WITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9